# ಮಾನಸಿ

ತಿಂಗಳ ಪತ್ರಿಕೆ ಜುಲೈ 1993

★ ಮಹಿಳಾ ಅಧ್ಯಯನ–ಸಮ್ಮೇಳನದ ವರದಿ

★ ಮಾತೆ ಮಹಾದೇವಿ

★ ಕಿರಣ್ ಬೇಡಿ

★ ಪೋಲೀಸ್ ಮತ್ತು ಮಹಿಳೆ

★ ಮುಚ್ಚಿಡ ಬಯಸುತ್ತೇನೆ

★ ಆತ್ಮಹತ್ಯೆಗೆ ಪ್ರಯತ್ನಿಸಿದ ನಂಜಮ್ಮ

# ಮಾನಸ
ತಿಂಗಳ ಪತ್ರಿಕೆ

ಸಂಪುಟ : ೮ ಸಂಚಿಕೆ : ೬

ಜುಲೈ - ೧೯೯೩





**ವಿಳಾಸ :**

"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು–560 067

**ಸಂಪರ್ಕ ವಿಳಾಸ**

ನಂ–457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ 2ನೆ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು-560 086

ಬಿಡಿ ಪ್ರತಿ : **3-00 ರೂ.**

ಸೂಚನೆ : ವಾರ್ಷಿಕ ಚಂದಾ : **25 ರೂ.**

ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.

ಬ್ಯಾಂಕ್ ಡ್ರಾಫ್ಟ್, ಎಂ.ಓ. ಗಳನ್ನು ಸಂಪರ್ಕ
ವಿಳಾಸಕ್ಕೆ ಕಳಿಸಿಕೊಡಬೇಕಾಗಿ ಕೋರಿದೆ.


**ಈ ಸಂಚಿಕೆಯಲ್ಲಿ...**




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು-೫೬೦೦೬೭



# ಸಂಪಾದಕೀಯ

ಮೈಸೂರಿನ ಮಹಿಳಾ ಅಧ್ಯಯನದ ಸಮ್ಮೇಳನ ಹಲವಾರು ಪ್ರಶ್ನೆಗಳನ್ನು ಎತ್ತಿದೆ. ಹೊಸ ಆರ್ಥಿಕ ನೀತಿ ಹಾಗೂ ರಾಜಕೀಯ ಹೊಂದಾಣಿಕೆಯ ದುಷ್ಪರಿಣಾಮಗಳ ಬಗ್ಗೆ ಬೆಳಕು ಚೆಲ್ಲಿದ ಇಡಿಯ ಸಂಕಿರಣ ಮಹಿಳಾ ಚಳುವಳಿ ಹಾಗೂ ಮಹಿಳಾ ಅಧ್ಯಯನದ ವಕ್ತಾರರಿಗೆ ಹಲವಾರು ಸವಾಲು ಎಸೆದಿದೆ. ಅಭಿವೃದ್ಧಿ-ಪಥದ ಬಗ್ಗೆಯೇ ನಾವು ಬಹಳ ಎಚ್ಚರಿಕೆಯಿಂದ ಇರಬೇಕಾದ ಸಂದರ್ಭ ನಮ್ಮ ಮುಂದಿದೆ. ಈ ಎಚ್ಚರಿಕೆಯ ಜೊತೆಗೆ ಅಭಿವೃದ್ಧಿಯ ಬಗ್ಗೆಯೇ ಒಂದು ಮಹಿಳಾ ಪರವಾದ ದೃಷ್ಟಿಕೋನ ಸ್ಪಷ್ಟವಾದ ಬೇಡಿಕೆಗಳಲ್ಲಿ ರೂಪಿತಗೊಳ್ಳಬೇಕಾದ ಜರೂರಿಯು ಇದೆ. ಅಸಂಘಟಿತ ಹಾಗೂ ಗ್ರಾಮೀಣ ಸಮುದಾಯದ ಮಹಿಳೆಯರ ಸ್ಥಿತಿಯಂತೂ ಅತ್ಯಂತ ಶೋಚನೀಯವಾಗಿ ಬಿಡುವ ಹಂತದಲ್ಲಿರುವುದರಿಂದ ಭಾರತದುದ್ದ ಈ ಮಹಿಳೆಯರನ್ನೊಳಗೊಳ್ಳುವ ಸಾಮೂಹಿಕ ನೆಲೆಯ ಒಂದು ಹೋರಾಟದ ಎಳೆ ರೂಪಿಸಲು ಸಾಧ್ಯವೇ ಎಂಬುದನ್ನು ಮಹಿಳಾ ಚಳುವಳಿ ತೀವ್ರವಾಗಿ ಚಿಂತಿಸಬೇಕಾಗಿದೆ.

ಸಂಕಿರಣದ ಇನ್ನೊಂದು ನೆಲೆಯಲ್ಲಿ ಮೂಡ ಬಂದ ಧ್ವನಿಯೆಂದರೆ ಹೀಗೆ ಘೋರವಾಗುತ್ತಿರುವ, ಭೀಕರಗೊಳ್ಳುತ್ತಿರುವ ಸತ್ಯಗಳನ್ನು ನಾವು ಎದುರಿಸಲು ಸಾಧ್ಯವಾಗುತ್ತಿದೆಯೇ ? ಆರ್ಥಿಕ ಅಭಿವೃದ್ಧಿಯ ಪಥದೊಂದಿಗೆ ತಳಕು ಹಾಕಿಕೊಂಡಿರುವ ಸಮಸ್ಯೆಗಳ ಹಿನ್ನಲೆಯಲ್ಲಿ ಹಿಂಸೆಗೆ ಹೆಚ್ಚು ಹೆಚ್ಚು ಮುಖಾಮುಖಿಯಾಗುತ್ತಿರುವ ಮಹಿಳೆಯರ ಅಗಾಧ ಮಟ್ಟದ ನೋವುಗಳಿಗೆ ಪರಿಹಾರ ಕಾನೂನಿನ ಚೌಕಟ್ಟಿನಲ್ಲಿ ಕಂಡು ಹಿಡಿಯಲು ಸಾಧ್ಯವೇ ? ಈ ಎಲ್ಲಾ ಸಮಸ್ಯೆಯ ಹಿನ್ನಲೆಯಲ್ಲಿ ಹೋರಾಟದ ನೆಲೆ ತೀವ್ರವಾಗಿ ಮೂಡಿ ಬರಲು ಸಾಧ್ಯವೇ ?

ಈ ಸಂದರ್ಭದಲ್ಲಿ ಮಹಿಳಾ ಚಳುವಳಿ ಸಣ್ಣ-ಪುಟ್ಟ ಗುಂಪುಗಳಲ್ಲಿ ಕೆಲಸ ಮಾಡುತ್ತಿದೆ. ಭಾರತದಗಲಕ್ಕೂ ಛಿದ್ರ ಛಿದ್ರವಾದ ಹಂತದಲ್ಲಿಯೇ ಕೆಲಸ ಮಾಡುತ್ತಿದೆ. ಒಂದು ಸಾಮೂಹಿಕ ಹೋರಾಟದ ಎಳೆಯನ್ನು ರೂಪಿಸಲು ಈ ಚಳುವಳಿಗೆ ಸಾಧ್ಯವಾಗುತ್ತದೆಯೇ ? ಸಾಧ್ಯವಾಗುವಂತಹ ಪ್ರಯತ್ನಗಳನ್ನಾದರೂ ಚಳುವಳಿ ಒಟ್ಟಾಗಿ ಮಾಡಬೇಕಾಗುತ್ತದೆ. ಅಸಂಘಟಿತ ಮಹಿಳಾ ಕಾರ್ಮಿಕರು ಗ್ರಾಮೀಣ ಸಮುದಾಯದ ನಿರ್ದಿಷ್ಟ ಬೇಡಿಕೆಗಳ ಸುತ್ತ ಹೋರಾಟ ನಡೆಸಲು ಪ್ರಾರಂಭಿಸಬೇಕಾಗಿದೆ. ಜೊತೆ ಜೊತೆಗೆ ಇತರ ಪ್ರಗತಿ ಪರ ಗುಂಪುಗಳೊಡನೆಯೂ ಕೂಡಿ ಹೆಚ್ಚು ಹೆಚ್ಚು ಕೆಲಸ ಮಾಡುವ ಅಗತ್ಯ ಮಹಿಳಾ ಚಳುವಳಿಯದಾಗಿದೆ.

# 'ಇಂಡಿಯನ್ ಅಸೋಸಿಯೇಷನ್ ಫಾರ್ ವಿಮೆನ್ಸ್ ಸ್ಟಡೀಸ್'ನ ಆರನೆಯ ಸಮ್ಮೇಳನದ ವರದಿ

ಎಚ್. ಎಸ್. ಸಿ.

ಮೇ 31 ರಿಂದ ಜೂನ್ 3ರವರೆಗೆ ಮೈಸೂರಿನಲ್ಲಿ ನಡೆದ ಈ ಆರನೆಯ ಮಹಿಳಾ ಅಧ್ಯಯನದ ಸಮ್ಮೇಳನದಲ್ಲಿ ಭಾರತದ ವಿವಿಧ ಮಹಿಳಾ ಸಂಸ್ಥೆಯ ಪ್ರತಿನಿಧಿಗಳೂ, ಸ್ವಯಂ ಸೇವಾ ಸಂಸ್ಥೆಗಳ ಕಾರ್ಯಕರ್ತೆಯರು, ಸರ್ಕಾರಿ ಮಹಿಳಾ ಅಧಿಕಾರಿಗಳು ಹಾಗೂ ನೇಪಾಲ, ಪಾಕಿಸ್ಥಾನ, ಬರ್ಮಾದ ಮಹಿಳೆಯರನೇಕರು ಪಾಲ್ಗೊಂಡಿದ್ದರು. ಇಡಿಯ ಸಮ್ಮೇಳನದ ಆಶಯ ಹೊಸ ಆರ್ಥಿಕ ನೀತಿ ಹಾಗೂ ಮಹಿಳೆಯರ ಮೇಲೆ ಇದರ ಪರಿಣಾಮಗಳನ್ನು ಕುರಿತು ಚರ್ಚಿಸುವುದಾಗಿದ್ದರೂ ಸಹ ಈ ಸಂಕಿರಣ ನಾಲ್ಕು ದಿನದ ಅವಧಿಯಲ್ಲಿ ಮಹಿಳೆಗೆ ಸಂಬಂಧಿಸಿದ ವಿವಿಧ ಆಯಾಮಗಳ ಮೇಲೆ ಬೆಳಕು ಚೆಲ್ಲುವುದಾಗಿತ್ತು. ಪರಿಸರ, ಹಿಂಸಾಚಾರ, ರಾಜಕೀಯ ವ್ಯವಸ್ಥೆ, ಆರೋಗ್ಯ ಸಾಮಾಜಿಕ ಭದ್ರತೆ—ಇಂತಹ ಅನೇಕ ವಿಚಾರಗಳ ಪರಿಧಿಯಲ್ಲಿ ಮಹಿಳೆಯರ ಸ್ಥಿತಿ–ಗತಿಗಳನ್ನು ಕುರಿತು ಇಲ್ಲಿ ಚರ್ಚಿಸಲಾಯಿತು. 'ವಿವಿಧ ಪ್ರದೇಶಗಳ ಕಾರ್ಯಕರ್ತೆಯರು ತಮ್ಮ ಭಾಗಗಳಲ್ಲಿ ಮುಖ್ಯವಾಗಿರುವ ಮಹಿಳಾ ಹೋರಾಟಗಳ ವೈಯಕ್ತಿಕ ಅನುಭವಗಳನ್ನು ಹಂಚಿಕೊಳ್ಳುವುದೂ ಈ ಸಂಕಿರಣದ ಭಾಗವಾದುದರಿಂದ ಅನುಭವ ಹಾಗೂ ವೈಚಾರಿಕತೆಗಳ ಬಂಧವನ್ನು ಏರ್ಪಡಿಸಲೂ ಕೂಡಾ ಇಲ್ಲಿ ಪ್ರಯತ್ನಿಸಲಾಗಿತ್ತು. ಮಹಿಳಾ ಕಾರ್ಯಕರ್ತೆ ಹಾಗೂ ಬೌದ್ಧಿಕ ವಕ್ತಾರರ ಮಧ್ಯೆ ಇರಬೇಕಾದ ಸಂಬಂಧಗಳ ಬಗ್ಗೆ ಇಡಿಯ ಸಮ್ಮೇಳನದಲ್ಲಿ ಆಗಾಗ್ಗೆ ಚರ್ಚೆಗೆ ಬರುತ್ತಿದ್ದು, 'ಪ್ರಾಕ್ಟೀಸ್' ಹಾಗೂ 'ಥಿಯರಿ'ಯ ಮಧ್ಯದ ಸಂಬಂಧವನ್ನು ಶೋಧಿಸುವ ಪ್ರಯತ್ನವೂ ಇದಾಗಿತ್ತು. ಈ ಸಂಕಿರಣ ಮೈಸೂರಿನಲ್ಲಿ ನಡೆದಿದ್ದರೂ ಕೂಡಾ ಕರ್ನಾಟಕದ ಮಹಿಳೆಯರು ಇದರಲ್ಲಿ ಹೆಚ್ಚು ರೀತಿಯಲ್ಲಿ ಭಾಗವಹಿಸಿದ್ದು ಕಂಡುಬರಲಿಲ್ಲ. ದೆಹಲಿ ಹಾಗೂ ಬಾಂಬೆಯ ಸ್ತ್ರೀವಾದಿಗಳ ಪ್ರಭುತ್ವವೇ ಇಡಿಯ ಸಂಕಿರಣದಲ್ಲಿ ಕಂಡುಬರುತ್ತಿದೆ ಎಂಬ ಪಿಸು ಮಾತುಗಳು ಕೇಳಿ ಬಂದವು. ಏನೇ ಆಗಿದ್ದಾಗ್ಯೂ ಭಾರತದ ವಿವಿಧ ಭಾಗಗಳಲ್ಲಿ ಕೆಲಸ ಮಾಡುತ್ತಿರುವ, ಅಧ್ಯಯನ ನಡೆಸುತ್ತಿರುವ ಮಹಿಳೆಯರಿಗೆ ಒಟ್ಟಿಗೆ ಬರುವುದಕ್ಕೆ ಇದೊಂದು ಒಳ್ಳೆಯ ಅವಕಾಶವಾಗಿತ್ತು. ಸಂಕಿರಣದ ಎಂಟು ವಿಭಾಗಗಳಲ್ಲಿ ಓದಲಾದ, ಚರ್ಚಿತವಾದ ಹಾಗೂ ಪ್ರತ್ಯೇಕ ವೇದಿಕೆಗಳಲ್ಲಿ ಹಂಚಿಕೊಳ್ಳಲಾದ ಚರ್ಚೆಗಳನ್ನು, ವಿಚಾರಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ಬರೆಯುತ್ತಿದ್ದೇವೆ.

## ಕೆಲಸ, ಉದ್ಯೋಗ ಮತ್ತು ಆಹಾರ ಭದ್ರತೆ

ಈ ವಿಚಾರಗಳನ್ನು ಹೊಸ ಆರ್ಥಿಕ ನೀತಿಯ ಹಿನ್ನೆಲೆಯಲ್ಲಿ ಇಲ್ಲಿ ವಿವೇಚಿಸಲಾಯಿತು. 1991ರ ಜುಲೈ 24ರಂದು ಹಣಕಾಸಿನ ಮಂತ್ರಿ ಹೊಸ ಆರ್ಥಿಕ ನೀತಿಯನ್ನು ಪರಿಚಯಿಸಿದರು. 1993ರ ಬಜೆಟ್‌ನಲ್ಲಿ ನೀತಿ ಮಂಡಿತವಾಗಿ ಜಾರಿಗೆ ತರುವ ಪ್ರಯತ್ನಗಳು ನಡೆಯುತ್ತಿವೆ. ರಾಚನಿಕ ಹೊಂದಾಣಿಕೆ, ಆಧುನಿಕ ಯಂತ್ರೋಪಕರಣಗಳು, ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಪರ್ಧೆ, ಪ್ರಪಂಚದ ಆರ್ಥಿಕತೆಯೊಂದಿಗೆ ಒಂದಾಗುವುದು—ಇವು ಹೊಸ ಆರ್ಥಿಕ ನೀತಿಯ ಮೂಲ ಗ್ರಹಿಕೆಗಳು. ಈ ಆರ್ಥಿಕ ನೀತಿಗಳಿಂದಾಗಿ ಜನರು ಉದ್ಯೋಗದ ಅವಕಾಶಗಳಿಂದ ವಂಚಿತರಾಗುತ್ತಾರೆ. ಏಕೆಂದರೆ ಇಲ್ಲಿ ಸರ್ಕಾರ ರೂಪಿಸುವ ಕೈಗಾರಿಕಾ ನೀತಿಯಾಗಲೀ ಅಥವಾ ಇತರ ನೀತಿಯಾಗಲೀ ಆಯಾ ದೇಶದ ಅಭಿವೃದ್ಧಿಯ ಕಡೆ ಮುಖ ಮಾಡದೇ I.M.F. ಹಾಗೂ ವರ್ಲ್ಡ್ ಬ್ಯಾಂಕ್‌ಗಳ ವಿಧೇಯಕಗಳಿಗೆ ಬದ್ಧವಾಗಿರುತ್ತವೆ. ಆಯಾ ದೇಶಕ್ಕೆ ಬೇಕಾದ ವಸ್ತುಗಳ ಉತ್ಪಾದನೆಗೆ ಪ್ರೋತ್ಸಾಹ ಕೊಡದೇ ಅಂತರರಾಷ್ಟ್ರೀಯ ಮಾರುಕಟ್ಟೆಯ ಬೇಡಿಕೆಗಳ ಉತ್ಪಾದನೆಗೆ ಪ್ರೋತ್ಸಾಹ ನೀಡುತ್ತದೆ. ಈ ಹಂತದಲ್ಲಿ ಮಹಿಳೆಯರ ಉದ್ಯೋಗಗಳಿಗೇ ಮೊದಲು ಕತ್ತರಿ ಬೀಳುತ್ತದೆ.

ಆಂಧ್ರದ ಮೀನು ಕೈಗಾರಿಕೆಯಲ್ಲಿ ಹೆಚ್ಚು ಇರುವವರು ಕೇರಳದಿಂದ ವಲಸೆ ಬಂದ ಅವಿವಾಹಿತ ಹೆಂಗಸರು.

ಮಧ್ಯವರ್ತಿಗಳಿಂದ ಇವರು ಕೇರಳಕ್ಕೆ ತರಲ್ಪಡುತ್ತಾರೆ. ಗೊತ್ತಾದ ಅವಧಿಯವರೆಗೆ ಮಾತ್ರ ಇವರಿಗೆ ಕೆಲಸ ಇರುತ್ತದೆ. ನಂತರ ಇವರನ್ನು ಕಳಿಸಿ ಬೇರೊಂದು ಮಹಿಳೆಯರ ಗುಂಪನ್ನು ತರಲಾಗುತ್ತಿದೆ. ಮೀನುಗಳನ್ನು-ಟ್ಯಾಂಕ್‌ಗಳಲ್ಲಿ ಬೆಳೆಸುವ ಮತ್ತು ಇದರ ಇತರ ಹಂತಗಳನ್ನು ಯಾಂತ್ರೀಕರಣಕ್ಕೆ ಒಳಪಡಿಸುವುದರಿಂದ ಇವರ ಅಲ್ಪ ಉದ್ಯೋಗಾವಕಾಶಕ್ಕೂ ಕತ್ತರಿ ಬೀಳುವಂತಾಗಿ ಇವರ ಸ್ಥಿತಿ ಶೋಚನೀಯವಾಗುತ್ತದೆ.

ಹೊಸ ಆರ್ಥಿಕ ನೀತಿಯಿಂದಾಗಿ ಕೈಗಾರಿಕಾ ಕೇಂದ್ರಗಳು ಹೆಚ್ಚು ಖಾಸಗೀಕರಣಕ್ಕೊಳಪಡುತ್ತವೆ. ಖಾಸಗೀಕರಣಕ್ಕೆ ಅನುಮತಿ ಹಾಗೂ ಪರವಾನಗಿಗಳು ಸುಲಭವಾಗಿ ಸಿಗುತ್ತವೆ. ಈ ಹಂತದಲ್ಲಿ 'ಪಬ್ಲಿಕ್ ಸೆಕ್ಟರ್'ನಲ್ಲಿ ಇರುವ ಉದ್ಯೋಗಾವಕಾಶದಲ್ಲಿ ವಂಚಿತರಾಗುವ ಪ್ರಮಾಣದ ಚಿತ್ರಣ ಇನ್ನೂ ಸಿಕ್ಕಿಲ್ಲ. ಜೀವ ವಿಮಾ ಕಂಪನಿ ಹಾಗೂ ಬ್ಯಾಂಕ್‌ಗಳಲ್ಲಿ ಸ್ವಯಂ ನಿವೃತ್ತರಾಗುವ ನೀತಿಯನ್ನು ಇನ್ನೂ ಅಳವಡಿಸಿಲ್ಲ. ಈ ಸ್ವಯಂ ನಿವೃತ್ತರಾಗುವ ನೀತಿಯಿಂದಾಗಿ ಗಣಿಗಳಲ್ಲಿ ಕೆಲಸ ಮಾಡುವ ಹೆಂಗಸರ ಪ್ರಮಾಣ ಕ್ರಮೇಣವಾಗಿ ಕಡಿಮೆಯಾಗುತ್ತಿದೆಯಲ್ಲದೇ ಹೆಂಗಸರು ನಿರುದ್ಯೋಗಿಗಳಾಗುವುದೂ ಕಂಡುಬರುತ್ತದೆ. ರಾಚನಿಕ ಹೊಂದಾಣಿಕೆಯ ಹಂತದಲ್ಲಿ ಆರೋಗ್ಯ ಸೇವೆಯಲ್ಲಿ ಕಡಿತ ಉಂಟಾಗುವುದರಿಂದ ಗಣಿಗಳಲ್ಲಿ ಕೆಲಸ ಮಾಡುವ ಹೆಂಗಸರ ಸ್ಥಿತಿಯಷ್ಟೇ ಅಲ್ಲ, ಇತರ ಮಹಿಳೆಯರ ಸ್ಥಿತಿಯೂ ಶೋಚನೀಯವಾಗುತ್ತಿದೆ.

ಬೀದಿಯಲ್ಲಿ ಬಿದ್ದ ಕಸವನ್ನು ಆರಿಸಿ ಅದನ್ನು ಮಾರಿ ಜೀವನ ಮಾಡುತ್ತಿದ್ದ ಮಹಿಳೆಯರ ಸಂಖ್ಯೆ ನಗರ ಪ್ರದೇಶಗಳಲ್ಲಿ ಅಧಿಕ. ವರ್ಲ್ಡ್ ಬ್ಯಾಂಕ್‌ನ ವೇಸ್ಟ್ ಮ್ಯಾನೇಜ್‌ಮೆಂಟ್ ಸ್ಕೀಮ್‌ನಿಂದಾಗಿ ಇದನ್ನು ಆಶ್ರಯಿಸಿ ಬದುಕುತ್ತಿದ್ದ ಮಹಿಳೆಯರು ಬೀದಿಪಾಲಾಗುತ್ತಾರೆ. ಈ ಮಹಿಳೆಯರು ಹಿಂದುಳಿದ ಜಾತಿ-ವರ್ಗಗಳಿಗೆ ಸೇರಿದವರಾಗಿರುವುದರಿಂದ ಇವರ ಸ್ಥಿತಿ ಇನ್ನೂ ಶೋಚನೀಯವಾಗಿರುತ್ತದೆ. ಗುಜರಾತಿನ 'ಸೇವಾ' ಸಂಘಟನೆಯವರು ಇವರನ್ನು ಸಂಘಟಿಸಿ, ಇವರ ವ್ಯವಹಾರದಲ್ಲಿ ಮಧ್ಯವರ್ತಿಗಳ ಪಾತ್ರವನ್ನು ತೆಗೆದು ಹಾಕುವಲ್ಲಿ ಸಫಲರಾಗಿದ್ದಾರೆ. 'ಮಾರುಕಟ್ಟೆ' ನೇರವಾಗಿ ಮಹಿಳೆಯರ ಕೈಗೆ ಸಿಗುವಂತೆ ಸಹಕಾರಿ ಸಂಘಗಳ ಮೂಲಕ ಶ್ರಮಿಸಿದ್ದಾರೆ. ಆದರೆ ಈ ಕಸದ ತೊಟ್ಟಿಗಳೂ ಕೂಡಾ ಇಂದು ಬಂಡವಾಳ ಶಾಹಿಗಳ ಕೈಗೆ ಹೋಗುತ್ತಿವೆ.

ಹೀಗೆ ಅಸಂಘಟಿತ ಕ್ಷೇತ್ರಗಳ ಮಹಿಳೆಯರು ಹೊಸ ಆರ್ಥಿಕ ನೀತಿಯಿಂದಾಗಿ ನಿರುದ್ಯೋಗದ ದೊಡ್ಡ ಸಮಸ್ಯೆಯನ್ನೇ ಎದುರಿಸಬೇಕಾಗುತ್ತದೆ. ಹಳ್ಳಿಗಾಡಿಗೆ ಸಂಬಂಧಿಸಿದ ಅಭಿವೃದ್ಧಿಯ ಖರ್ಚು-ವೆಚ್ಚಗಳಲ್ಲಿ ಕಡಿತ ಇರುವುದರಿಂದ ಹಳ್ಳಿಗಾಡು ಹೆಂಗಸರು ಎಷ್ಟರ ಮಟ್ಟಿಗೆ ಸಾಲ-ಸೌಲಭ್ಯ ಸರ್ಕಾರದಿಂದ ಪಡೆಯುತ್ತಾರೆ ಎಂಬುದಂತೂ ಪ್ರಶ್ನೆಯಾಗಿಯೇ ಉಳಿಯುತ್ತದೆ. ಅಸಂಘಟಿತ ಕೇತ್ರದ ಮಹಿಳೆಯರ ಸ್ಥಿತಿ-ಗತಿಗಳು ಶೋಚನೀಯವಾಗುವುದರಲ್ಲಿ ಸಂಶಯವೇ ಇಲ್ಲ.

ನಮ್ಮಲ್ಲಿ 'ಸಾರ್ವಜನಿಕ ಆಹಾರ ಹಂಚಿಕೆ'ಯ ವ್ಯವಸ್ಥೆಯ ಮೇಲೆ ಬಹಳಷ್ಟು ಬಡಜನರು ಅವಲಂಬಿತರಾಗಿದ್ದಾರೆ. ಗೋಧಿ, ಅಕ್ಕಿ, ಸಕ್ಕರೆ, ಎಣ್ಣೆ, ಸೀಮೆ ಎಣ್ಣೆ ಮುಂತಾದವುಗಳಿಗೆ ಸರ್ಕಾರದ ಪಡಿತರ ವ್ಯವಸ್ಥೆಯ ಮೇಲೆ ಜನರ ಅವಲಂಬನೆ ಇರುತ್ತದೆ. ಅಂತರ ರಾಷ್ಟ್ರೀಯ ಆರ್ಥಿಕತೆಯಲ್ಲಿ ಒಂದಾಗ ಬಯಸುವ ಭಾರತದ ಹೊಸ ಆರ್ಥಿಕ ನೀತಿ ವ್ಯವಸಾಯದ ಉತ್ಪನ್ನಗಳಿಗೆ ಪ್ರಾಮುಖ್ಯತೆ ನೀಡುವುದಿಲ್ಲ. ಇದರಿಂದ ಆಹಾರದ ಅಭದ್ರತೆ ಉಂಟಾಗಿ 'ಸಾರ್ವಜನಿಕ ಆಹಾರ ಹಂಚಿಕೆ'ಯ ವ್ಯವಸ್ಥೆಯ ಮೇಲೆ ಇದು ಭಾರೀ ಪರಿಣಾಮ ಉಂಟು ಮಾಡುತ್ತದೆ, ಕುಟುಂಬಕ್ಕೆ ಆಹಾರ ಹೊಂದಿಸುವ ಜವಾಬ್ದಾರಿ ಕೊನೆಗೆ ಹೆಣ್ಣಿನ ಮೇಲೆಯೇ ಬೀಳುವುದರಿಂದ ಅವರ ಮೇಲೆ ಹೆಚ್ಚಿನ ಒತ್ತಡಗಳು ಉಂಟಾಗುತ್ತದೆ.

ಈಗಾಗಲೇ ಆರೋಗ್ಯ, ವಿದ್ಯಾಭ್ಯಾಸ, ಆಹಾರ, ಜೀವನಮಟ್ಟ ಮುಂತಾದ ವಿಚಾರಗಳಲ್ಲಿ ಹೊಸ ಆರ್ಥಿಕ ನೀತಿಯಿಂದ ಉಂಟಾಗಿರುವ ದುಷ್ಪರಿಣಾಮಗಳು ನಮಗೆ ಫಿಲಿಪೈನ್ಸ್, ಪೆರು, ಬೊಲೀವಿಯಾ, ಘಾನಾದ ಹೆಂಗಸರ ಅನುಭವಗಳಲ್ಲಿ ತಿಳಿದು ಬರುತ್ತಿದೆ. ಇವು ನಮ್ಮನ್ನು ಧೃತಿಗೆಡಿಸುತ್ತಿವೆ. ಬದುಕುವ ಹೋರಾಟಕ್ಕೆ ಅನೇಕ ತಂತ್ರಗಳನ್ನು ಈ ದೇಶದ ಮಹಿಳೆಯರು ರೂಢಿಸಿಕೊಳ್ಳ ತೊಡಗಿದ್ದಾರೆ. ಸಹಕಾರಿ ಸಂಘಗಳಲ್ಲಿ ತಮ್ಮನ್ನು ಸಂಘಟಿಸುವುದರಿಂದ ಹಿಡಿದು 'ಸೂಪ್-ಕಿಚನ್' ಸ್ಥಾಪಿಸಿಕೊಳ್ಳುವವರೆಗೆ ಅವರು ಬದುಕುವ ತಂತ್ರ ರೂಪಿಸಿಕೊಂಡಿದ್ದಾರೆ.

ದಕ್ಷಿಣ ಕೊರಿಯಾ, ಮೆಕ್ಸಿಕೋ ಇಂತಹ ದೇಶಗಳ ಸಾಲಿಗೆ ಈಗ ಇಂಡಿಯಾ ಸೇರುತ್ತಿದೆ. ಹೊಸ ಆರ್ಥಿಕ ನೀತಿಯ ಬಗ್ಗೆ ಮಹಿಳಾ ಚಳುವಳಿ, ಮಹಿಳಾ ಅಧ್ಯಯನದ ವಕ್ತಾರರು ರೂಪಿಸಿಕೊಳ್ಳಬೇಕಾದ ಅಭಿವೃದ್ಧಿ ದೃಷ್ಟಿಕೋನಗಳ ಬಗ್ಗೆ ಇಲ್ಲಿ ಚರ್ಚಿಸಲಾಯಿತು.

(ಈ ವಿಭಾಗದಲ್ಲಿ ಶಾಂತಾ ವೈದ್ಯ, ನೀರಜ್ ಕಮಲ, ರಾಮೇಶ್ವರಿ ವರ್ಮ; ಮೇಲಿಯಟ್ ಕಾರಿ, ವಿದ್ಯಾಧರ ಗಾಡ್ಗಿಲ್; ಸವಾ ಅಕ್ತರ್ ಖಾನ್, ಜ್ಯೋತಿಕಿರಣ್, ರತ್ನ ಕುಮಾರಿ, ಸಲೀಲಾ, ಫರೀದಾ ಹುಸೇನ್, ನಂದಿತಾ ಶಾ ನಂದಿತಾ ಗಾಂಧಿ, ಸುಜಾತ ಗೊಟೋಸ್ಕರ್ ಮುಂತಾದವರು ಓದಿದ, ಚರ್ಚಿಸಿದ ವಿಚಾರ ಸಂಗ್ರಹ.)

## 2. ವಿದ್ಯಾಭ್ಯಾಸ, ಸಂಸ್ಕೃತಿ ಮತ್ತು ಮಾಧ್ಯಮ

ದೂರದರ್ಶನ ಚಿತ್ರಿಸುವ ಮಹಿಳಾ ಪಾತ್ರದ ಬಗ್ಗೆ ಇಲ್ಲಿ ಗಮನ ಸೆಳೆಯಲಾಯಿತು. ಯು. ಎನ್. ಅಂತರ ರಾಷ್ಟ್ರೀಯ ವರ್ಷವೆಂದು (1975-85) ಕರೆದ ಶತಕದಲ್ಲಿ 'ವಾರ್ತಾ ಮತ್ತು ಪ್ರಚಾರ' ಇಲಾಖೆ ದೂರದರ್ಶನದ ಮಹಿಳಾ ದೃಷ್ಟಿಕೋನದ ಬಗ್ಗೆ ಗಮನ ವಹಿಸಿತು. ಆದಾಗ್ಯೂ ದೂರದರ್ಶನದಲ್ಲಿ ಒಟ್ಟಾಗಿ ಈ ಮಹಿಳಾ ದೃಷ್ಟಿಕೋನ ರೂಪಿತವಾಗಿಲ್ಲ.

ಶಿಕ್ಷಣ ಹೊಸ ಆರ್ಥಿಕ ನೀತಿಯ ದುಷ್ಪರಿಣಾಮ ತಡೆಯುವ ಮಾಧ್ಯಮವಾಗಬೇಕು. ಪತ್ರಿಕೆಗಳಲ್ಲಿ 1979-88ರಲ್ಲಿ ಮಹಿಳಾ ಸಮಸ್ಯೆಗಳ ಬಗ್ಗೆ ಸಾಕಷ್ಟು ಬೆಳಕು ಚೆಲ್ಲಲಾಗಿದೆ. ಆದಾಗ್ಯೂ ಮಾಧ್ಯಮಗಳಿಗಿರುವ ಪಕ್ಷದ ರಾಜಕೀಯ, ಮಹಿಳೆಯರ ಬಗ್ಗೆಗಿನ ಪೂರ್ವಗ್ರಹ ಪೀಡಿತ ಅಭಿಪ್ರಾಯಗಳಿಂದಾಗಿ ಕೆಲವು ಸಮಸ್ಯೆಗಳು ಬೆಳಕಿಗೆ ಬರುತ್ತಿದ್ದರೂ ವಿಷಯ ಸಂಗ್ರಹಣೆ ಮಹಿಳಾ ದೃಷ್ಟಿಕೋನ ಒಳಗೊಂಡಿಲ್ಲ.

ಸಂಪೂರ್ಣ ಅಕ್ಷರ ಕಲಿಕೆಯ ಯೋಜನೆಯಾದ 'ಸಮತಾ' ದ ಅನುಭವ ಭಾರತೀಯ ಮಹಿಳಾ ಚಳುವಳಿಗೊಂದು ಶ್ರೀಮಂತ ಅನುಭವವಾಗಿದೆ. ಸರ್ಕಾರದಿಂದ ಪ್ರಾಯೋಜಿತ ಕಾರ್ಯಕ್ರಮವಾದರೂ ಸ್ವಯಂ ಸೇವಾ ಸಂಸ್ಥೆಗಳನೊಡಗೂಡಿ ಈ ಅಕ್ಷರ ಕಾರ್ಯಕ್ರಮ ಸಾಕಷ್ಟು ಅಧಿಕ ಪ್ರಮಾಣದ ಮಹಿಳೆಯರನ್ನು ಸಂಘಟಿಸಿದೆ. ಅಕ್ಷರ ಕಲಿಕೆಯಿಂದ ಮಹಿಳೆಯರ ಸ್ವಾವಲಂಬನೆ ಶಕ್ತಿ ಸಾಧ್ಯ ಎಂಬುದು ಇಲ್ಲಿಯ ಗ್ರಹಿಕೆ. 'ಜಾಥಾ'ಗಳಲ್ಲಿ ಸಾಂಸ್ಕೃತಿಕ ಮಾಧ್ಯಮಗಳ ಮೂಲಕ ತಮ್ಮ ಉದ್ದೇಶ ಮಹಿಳೆಯರಿಗೆ ಮುಟ್ಟಿಸುವಲ್ಲಿ ಇವರು ಸಫಲರಾಗಿದ್ದಾರೆ.

ಹೊಸ ಆರ್ಥಿಕ ನೀತಿಯ ದುಷ್ಪರಿಣಾಮದ ಬಗ್ಗೆ ತಿಳುವಳಿಕೆ ನೀಡಲು ಹೆಂಗಸರಿಗೆ ಶಿಕ್ಷಣ ಅಗತ್ಯ. ಈ ಶಿಕ್ಷಣ ಮಹಿಳೆಯ ನಿತ್ಯದ ಅವಶ್ಯಕತೆಗಳಿಗೆ ಪೂರಕವಾಗಿರಬೇಕಾಗುತ್ತದೆ. ಆರ್ಥಿಕ ನೀತಿಯ ಯೋಜನೆಗಳಲ್ಲಿ, ನಿರ್ವಹಣೆಯಲ್ಲಿ ಮಹಿಳೆಯರನ್ನು ಒಳಗೊಂಡೇ ಸರ್ಕಾರ ಕೆಲಸ ಮಾಡಬೇಕೆಂಬ ಬೇಡಿಕೆಯನ್ನು ಮುಂದಿಡುವುದಾದಲ್ಲಿ ಹೆಂಗಸರಿಗೆ ಶಿಕ್ಷಣ ಅತ್ಯಗತ್ಯವಾಗುತ್ತದೆ. ಪ್ರಾಥಮಿಕ ಶಾಲೆಗಳ ಖಡ್ಡಾಯ ಶಿಕ್ಷಣ ನೀತಿ ಸರಿಯಾಗಿ ಜಾರಿಗೊಳ್ಳಬೇಕು. 'ಮಕ್ಕಳ ಕೆಲಸದ' ಹೊರೆ ತೆಗೆದು ಹಾಕಬೇಕು. ಒಟ್ಟಾಗಿ ಮಹಿಳೆಯ ಸ್ವಾವಲಂಬನೆಗೆ ಪೂರಕವಾದ ಶಿಕ್ಷಣ ರೂಪಿಸಬೇಕು. (ಕೆ. ಮಯೂರಿ, ಸಿ. ವಾಹಿತಿ ; ಸೂಸಾನ್ ವರ್ಗೀಸ್, ಸವಿತಾ ; ನಂದಿನಿ, ಕಲ್ಪನಾ ಶರ್ಮ, ಅಮ್ಮು ಜೋಸೆಫ್ ; ಸುಧಾ, ವಿಮಲಾ ರಾಮಕೃಷ್ಣ ; ಅಂಜನಾ ಮಂಗಲಗಿರಿ ; ಅನಿತಾ ದಿಗೆ ; ಅನಿತಾ ರಾಮ್ ಪಾಲ್).

## 3. ಆರೋಗ್ಯ ಮತ್ತು ಜನಸಂಖ್ಯೆ

ಹೆಂಗಸರು ಮುಖ್ಯವಾಗಿ ಅಪೌಷ್ಟಿಕತೆ ಹಾಗೂ ನಿರ್ದಿಷ್ಟ ಬಗೆಯ ಕಾಯಿಲೆಗಳಿಂದ ಸಾಯುತ್ತಾರೆ. ಬಾಲ್ಯದಲ್ಲಿ, ಹೆರಿಗೆಯ ಸಂದರ್ಭದಲ್ಲಿ ಸಾವಿನ ಸಂಖ್ಯೆ ಜಾಸ್ತಿ. ಆಡಳಿತ ಯಂತ್ರ ಮಹಿಳೆಯರ ಆರೋಗ್ಯದ ಬಗ್ಗೆ ಸೂಕ್ಷ್ಮಮತಿಗಳಾಗದಿದ್ದರೆ ಸರಿಯಾದ ಆರೋಗ್ಯ ಸೇವೆಗಳು ಮಹಿಳೆಯರಿಗ ದಕ್ಕುವುದಿಲ್ಲ. ಹೊಸ ಆರ್ಥಿಕ ನೀತಿ ಹಾಗೂ ರಾಜಕೀಯ ಹೊಂದಾಣಿಕೆಯ ಹಂತದಲ್ಲಿ ಕೆಲಸಗಳಿಂದ ವಂಚಿತರಾಗುವ ಹೆಂಗಸರು ಪೌಷ್ಟಿಕಾಂಶದ ಕೊರತೆಗಳಿಂದ-ನರಳುತ್ತಾರೆ. ಕೊಳ್ಳುವಿಕೆಯ ಶಕ್ತಿ ಕಡಿಮೆಯಾದ ಹಾಗೆ ಉಪಭೋಗದ ಸ್ಥಿತಿಯೂ ಕಡಿಮೆಯಾಗುತ್ತದೆ. ವಾಣಿಜ್ಯ ಬೇಡಿಕೆಯ ಬೆಳೆಗಳು ಹೆಚ್ಚು ಹೆಚ್ಚಾಗುತ್ತಾ ಹೋಗುವುದರಿಂದ ಆಹಾರದ ಬೆಳೆಗಳು ನಾಶವಾಗುತ್ತಾ ಹೋಗಿ ಹಳ್ಳಿಗಾಡು ಹೆಂಗಸರಿಗೆ ಆಹಾರದ ಮೇಲಾಗಲೀ ಅಥವಾ ಕೊಳ್ಳಲಿಕ್ಕೆ ಬೇಕಾದ ಹಣದ ಮೇಲಾಗಲೀ ನಿಯಂತ್ರಣ ತಪ್ಪಿ ಹೋಗುತ್ತದೆ. ವಾಣಿಜ್ಯ ಸ್ತರದ ಬೆಳೆಗಳು_ಅವುಗಳ ಉತ್ಪಾದನಾ ಹಂತದ ಕೆಲಸಗಳು ಯಾಂತ್ರೀಕರಣಕ್ಕೆ ಒಳಗಾಗುವುದರಿಂದ ಹಳ್ಳಿಗಾಡು ಹೆಂಗಸರು ನಿರುದ್ಯೋಗಿಗಳಾಗುತ್ತಾರೆ. ಅವರ ಆರ್ಥಿಕ ಅವಲಂಬನೆ ಅವರ

ಆರೋಗ್ಯದ ಮೇಲೆ ಪರಿಣಾಮ ಉಂಟು ಮಾಡುತ್ತದೆ. ಮೊದಲನೇ ಜಗತ್ತಿನಲ್ಲಿ ತಿರಸ್ಕರಿಸ್ಪಟ್ಟ ಗರ್ಭ ನಿರೋಧಕ ಮುಂತಾದವುಗಳು ಮುಕ್ತ ಆರ್ಥಿಕ ನೀತಿಯಿಂದಾಗಿ ಇನ್ನೂ ಹೆಚ್ಚಾಗಿ ಮೂರನೇ ಜಗತ್ತಿಗೆ ತಳ್ಳಲ್ಪಡುತ್ತವೆ. ಬಹು ರಾಷ್ಟ್ರೀಯ ಸಂಸ್ಥೆಗಳು ಮಹಿಳೆಯರನ್ನು ಕಡಿಮೆ ದರ್ಜೆಯ, ಕಡಿಮೆ ಆದಾಯದ, ಕಷ್ಟಕರ ಕೆಲಸಗಳಲ್ಲಿ ತೊಡಗಿಸುತ್ತಾರೆ. ಇವೆಲ್ಲವೂ ಒಟ್ಟಾಗಿ ಹೆಂಗಸರ ಆರೋಗ್ಯದ ಮೇಲೆ ಪ್ರಭಾವ ಬೀರುತ್ತವೆ. ರಾಚನಿಕ ಹೊಂದಾಣಿಕೆಯ ಹಂತದಲ್ಲಿ ಆರೋಗ್ಯ ಸೇವೆಗಳ ಖಾಸಗೀ ಕಾರಣದಿಂದಾಗಿ ಮಹಿಳೆಯರು ತಮ್ಮ ಆರೋಗ್ಯವನ್ನು ಮೂಲೆ ಗುಂಪಾಗಿಸಬೇಕಾಗುತ್ತದೆ.

ಗಿಡ ಮೂಲಿಕೆ ಅವಲಂಬಿಸಿ ಸಾಂಪ್ರದಾಯಿಕ ಹಂತದಲ್ಲಿ ಮಹಿಳೆಯರು ಆರೋಗ್ಯದ ಬಗ್ಗೆ ಕಾಳಜಿ ತೋರುವ ಶಕ್ತಿ ಹೊಂದಿದ್ದರು. ಇಂದು ಮಹಿಳೆಯರ ಸ್ವಾವಲಂಬನೆ, ಸ್ವ ಶಕ್ತಿಯ ಹರವುಗಳಿಗಾಗಿ ಈ ಸಾಂಪ್ರದಾಯಿಕ ಜ್ಞಾನ ಕಾಪಾಡುವ ಅಗತ್ಯ ಇದೆ. 'ಶೋಧಿನಿ'- ಭಾರತದ ಒಂದು ಸ್ವಯಂ ಸೇವಾ ಸಂಸ್ಥೆ, ಈ ಸಂಸ್ಥೆ ಮಹಿಳೆಯರ ಆರೋಗ್ಯಕ್ಕೆ ಗಿಡ ಮೂಲಿಕೆ ವೈದ್ಯದ ಜ್ಞಾನವನ್ನು ಕಾಪಾಡಲು, ಶೋಧಿಸಲು ಪ್ರಯತ್ನಿಸುತ್ತಿದೆ. ಇನ್ನೂ ಅನೇಕ ಪುಟ್ಟ ಪುಟ್ಟ ಸಂಸ್ಥೆಗಳು ಈ ಕೆಲಸ ಮಾಡುತ್ತಿವೆ. ಹೆಂಗಸರಿಗೆ ಗಿಡ ಮೂಲಿಕೆಗಳ ಬಗ್ಗೆ ಗಿರುವ ಜ್ಞಾನ ಅವರಿಗೆ ಆರೋಗ್ಯದ ಮೇಲಿರುವ ಹಿಡಿತ, ನಿಯಂತ್ರಣವನ್ನು ಸೂಚಿಸುತ್ತದೆ. ಅನೇಕ ಸಂಸ್ಥೆಗಳು, ವ್ಯಕ್ತಿಗಳು ಈ ಗಿಡ ಮೂಲಿಕೆಗಳನ್ನು ತಮ್ಮ ಹಿತ್ತಲದ ಅಂಗಳದಲ್ಲಿಯೇ ಬೆಳೆಯಲು ಪ್ರಾರಂಭಿಸಿದ್ದಾರೆ. 'ಶೋಧಿನಿ'- ಸ್ಥಳೀಯ ಹೆಂಗಸರು ಈ ಔಷಧಿಗಳನ್ನು 'ಪ್ರಾಸೆಸ್' ಮಾಡುವ ಕೇಂದ್ರಗಳನ್ನು ಸಂಸ್ಥೆಯಿಂದಲೇ ಪ್ರಾರಂಭಿಸಿದ್ದಾರೆ. ಹೊಸ ಆರ್ಥಿಕ ನೀತಿಯ ರಾಚನಿಕ ಹೊಂದಾಣಿಕೆ ಆರೋಗ್ಯ ಸೇವೆಯ ಮೇಲೆ ಹಾಗೂ ಆಹಾರ ಸಬ್ಸಿಡಿಯ ಮೇಲೆ ಮಿತಿಗಳನ್ನು ಹೇರುವುದರಿಂದ ಹೆಂಗಸರ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗುತ್ತದೆ. ಖಾಸಗೀಕರಣದಿಂದಾಗಿ ಬೆಲೆಗಳು ಕೈಗೆಟುಕದವಾಗುತ್ತವೆ. 'ಶೋಧಿನಿ'-ಯಂತಹ ಪ್ರಯತ್ನಗಳು, ಸ್ಥಳೀಯ ಸಂಪನ್ಮೂಲಗಳ ಮೇಲೆ ಹಿಡಿತ ಹೊಂದಲು, ತಮ್ಮ ಆರೋಗ್ಯವನ್ನು ಮಹಿಳೆಯರು ತಮ್ಮ ನಿಯಂತ್ರಣದಲ್ಲಿಯೇ ಇಟ್ಟುಕೊಳ್ಳಲು ಸಹಾಯವೆಸಗುತ್ತವೆ.

ಕುಟುಂಬ ಯೋಜನೆಯ ಮೂಲಕ ಸರ್ಕಾರ ಹೆಣ್ಣಿನ ದೇಹ ಹಾಗೂ ತಾಯ್ತನದ ಮೇಲೆ ನಿಯಂತ್ರಣ ಸಾಧಿಸಲು ಪ್ರಯತ್ನಿಸುತ್ತದೆ. ಈ ಎಲ್ಲ ಯೋಜನೆಗಳೂ ಹೆಂಗಸರಿಗೆ ವಿರುದ್ಧವಾಗಿಯೇ ಇರುತ್ತವೆ.

(ಸುಪ್ರಿಯಾ ಗುಹಾಂ ; ವಿ. ರಾಜಮ್, ಎಸ್. ಆರ್ ಚೂಡಾಂಬಿಕೆ ; ದಿವ್ಯ ಪಾಂಡೆ ; ರೇಣು ಖಾನಾ ; ಮಾಲಿನಿ ಕಾರ್ಕಳ್ ; ಮೀರಾ ಸದ್ಗೋಪಾಲ್ ; ರಮಾ ವೈದ್ಯನಾಥನ್, ಇಂದಿರಾದೇವಿ, ಕೆ.ವಿ. ನಾಯ್ಡು ;)

## 4. ಕುಟುಂಬ ಮತ್ತು ಸಾಮಾಜಿಕ ಭದ್ರತೆ

ಮಹಿಳೆಯರು ಉದ್ಯೋಗಿಗಳಾಗಿರುವುದರಿಂದ ಅಲ್ಲಿ ಎರಡು ಅಂಶಗಳು ಇರುತ್ತವೆ. ಅವರು ಉತ್ಪಾದಕರಾಗಿರುತ್ತಾರೆ. ಜೊತೆಗೆ ಅವರಲ್ಲಿ ಹಣ ಇರುತ್ತದೆ. ಇದು ಅವರಿಗಿರುವ ಒಂದು ಸಾಮಾಜಿಕ ಭದ್ರತೆ. ಆದರೆ ಮಹಿಳೆಯರು ಈ ಉದ್ಯೋಗಗಳನ್ನು ಕೆಲವು ಸಂದರ್ಭಗಳಲ್ಲಿ ಕಳೆದುಕೊಳ್ಳಬೇಕಾಗುತ್ತದೆ. ಅದು ಅವರ ದೈಹಿಕ ಕಾರಣದಿಂದ ಇರಬಹುದು. ಅಥವಾ ದೇಶದ ಆರ್ಥಿಕ ಮುಗ್ಗಟ್ಟಿನಿಂದಾಗಿ ಇರಬಹುದು. ಈ ಸಂದರ್ಭದಲ್ಲಿ ಸಾಮಾಜಿಕ ಭದ್ರತೆ ಸಂಘಟಿತ ಕ್ಷೇತ್ರದ ಮಹಿಳೆಯರಿಗೆ ಮಾತ್ರ ದೊರಕುತ್ತದೆ. ಅಸಂಘಟಿತ ಕ್ಷೇತ್ರದ ಮಹಿಳೆಯರು ಈ ಸಾಮಾಜಿಕ ಭದ್ರತೆ ಪಡೆಯುವುದಿಲ್ಲ. ಗುಜರಾತಿನ 'ಸೇವಾ' ಸಂಸ್ಥೆ ಈ ಹಂತದಲ್ಲಿ ಅಸಂಘಟಿತ ಮಹಿಳೆಯರ ಸ್ಥಿತಿ-ಗತಿಗಳನ್ನು ಸುಧಾರಿಸಿದೆ. ಪೂರ್ಣ ಸಮಯದ ಉದ್ಯೋಗಿ ಆದರೆ ಆರೋಗ್ಯ, ಮಕ್ಕಳ ನೋಡಿಕೊಳ್ಳುವ ಭದ್ರತೆ ಇಂತಹ ಸಾಮಾಜಿಕ ಭದ್ರತೆ ಹೊಂದಿರುತ್ತಾರೆ. ಗುಜರಾತಿನ ಸೇವಾ ಅಸಂಘಟಿತ ಮಹಿಳೆಯರಿಗೆ ಈ ಸಾಮಾಜಿಕ ಭದ್ರತೆ ನೀಡಿದೆ. ಹಣ ಹಾಕುವ, ಅದನ್ನು ನಿರ್ಧರಿಸುವ ಎರಡೂ ಹಕ್ಕುಗಳನ್ನು ಮಹಿಳಾ ಸಹಕಾರ ಸಂಘಗಳಿಂದ ಒದಗಿಸಿದೆ. 50,000 ಹೆಂಗಸರು ಇಲ್ಲಿ ಹೀಗೆ ಸಂಘಟಿತರಾಗಿದ್ದಾರೆ. ಅಸಂಘಟಿತ ಮಹಿಳಾ ಪ್ರಗತಿಗಾಗಿ 'ಪ್ರತ್ಯೇಕ ರಾಷ್ಟ್ರೀಯ ನಿಧಿ'– ರೂಪಿಸಬೇಕೆಂಬ ಬೇಡಿಕೆಯನ್ನು ಸರ್ಕಾರದ ಮುಂದೆ ಇಟ್ಟಿದ್ದಾರೆ.

ಶತಮಾನಗಳ ಹಿಂದೆ ಕುಟುಂಬ ವ್ಯಕ್ತಿಗಳಿಗೆ ಭದ್ರತೆ ನೀಡುವ ಸಂಸ್ಥೆಯಾಗಿತ್ತು. ಆದರೆ ತೀವ್ರವಾಗಿ ಬೆಳೆಯುತ್ತಿರುವ ನಗರೀಕರಣದಲ್ಲಿ, ಕೈಗಾರಿಕಾ ನೀತಿಯಲ್ಲಿ ಸರ್ಕಾರ ಈ ಭದ್ರತೆಯನ್ನು ವ್ಯಕ್ತಿಗಳಿಗೆ ನೀಡಬೇಕಾಗಿದೆ.

ಭಾರತದ ಸಂವಿಧಾನ 'ಕುಟುಂಬ' ದ ಬಗ್ಗೆ ಸ್ಪಷ್ಟ ಹೇಳಿಕೆ ನೀಡುವುದಿಲ್ಲ. ಜನಸಂಖ್ಯಾ ನಿಯಂತ್ರಣದ ಯೋಜನೆಗಳಲ್ಲಿ ಮಾತ್ರ ಕುಟುಂಬವನ್ನು ಪರಿಗಣಿಸುತ್ತದೆ ಭಾರತದಲ್ಲಿ ಭಿನ್ನ ಧಾರ್ಮಿಕ ಗುಂಪುಗಳಿಗೆ ಭಿನ್ನ ಭಿನ್ನ ಕುಟುಂಬದ ಕಾನೂನುಗಳಿವೆ. ಈ ಕೌಟುಂಬಿಕ ಕಾನೂನುಗಳು ನಾಗರಿಕರ ಜೀವನದ ಮೇಲೆ ಬೇರೆ ಬೇರೆ ರೀತಿಯ ಪ್ರಭಾವ ಬೀರುತ್ತಿವೆ. ನಮ್ಮಲ್ಲಿ ಮಕ್ಕಳು, ಮನೆ, ಶಿಕ್ಷಣ ಇತ್ಯಾದಿಗಳ ಬಗ್ಗೆ ಬೇರೆ ಬೇರೆ ಕಾನೂನುಗಳಿವೆ. ಆದರೆ ಒಟ್ಟಾಗಿ ಕುಟುಂಬದ ಬಗ್ಗೆ ಒಂದು ನೀತಿ ರೂಪುಗೊಂಡಿಲ್ಲ.

(ತಾರಾ ರಾಮ್‌ಕುಮಾರ್; ಮುರಳಿ ದೇಸಾಯಿ; ಲೀಲಾ; ವಿದ್ಯಾವತಿ; ವಿಜಯಲಕ್ಷ್ಮಿ; ನೀಲಾ ದಾಲೀಸ್; ಆಶಾ; ಶಾಂತಿ; ಮಾಲಿನಿ ಕಾರ್ಕಳ).

## 5. ಪ್ರಾಕೃತಿಕ ಸಂಪನ್ಮೂಲಗಳು ಮತ್ತು ಪರಿಸರ

ಮಿಶ್ರ ಆರ್ಥಿಕ ನೀತಿಯಾಗಲೀ ಅಥವಾ ಸ್ವತಂತ್ರ್ಯ ಆರ್ಥಿಕ ವಿಚಾರಧಾರೆಯಾಗಲೀ ಒಂದೇ ಮೂಲಭೂತ ದೃಷ್ಟಿಕೋನದಿಂದ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಿಯೋಜಿಸುತ್ತವೆ. ಅದೆಂದರೆ ಪ್ರಾಕೃತಿಕ ಸಂಪನ್ಮೂಲಗಳನ್ನು ಬಳಸಿಕೊಳ್ಳುವುದರ ಮೇಲೆ ಅವಲಂಬಿತವಾಗಿರುವ ಅಭಿವೃದ್ಧಿ ಕಾರ್ಯಕ್ರಮಗಳು. ಹೊಸ ಆರ್ಥಿಕ ನೀತಿ ಮತ್ತು ರಾಚನಿಕ ಹೊಂದಾಣಿಕೆಯ ಹಂತದಲ್ಲಿ ಶ್ರೀಮಂತ ವರ್ಗಕ್ಕೆ ಬಡವರ್ಗ ತಾವು ನಂಬಿ, ನೆಚ್ಚಿಕೊಂಡಿರುವ ಪ್ರಾಕೃತಿಕ ಸಂಪನ್ಮೂಲಗಳನ್ನು ಬಿಟ್ಟುಕೊಡಬೇಕಾಗುತ್ತದೆ. ಇದರ ಪ್ರಭಾವ ಹೆಂಗಸರ ಮೇಲೆ ಕಂಡುಬರುತ್ತದೆ. ಹೆಚ್ಚಾಗುತ್ತಿರುವ ಮಹಿಳೆಯ ಮೇಲಿನ ಹಿಂಸಾಚಾರಗಳು ಆಧುನಿಕ ಅಭಿವೃದ್ಧಿಯ ಭಾಗಗಳಾಗಿವೆ. ಪ್ರಾಕೃತಿಕ ಸಂಪನ್ಮೂಲಗಳನ್ನು ಕಸಿದುಕೊಳ್ಳುವುದರ ಮೂಲಕ ಹಳ್ಳಿಗಾಡು ಹೆಂಗಸರನ್ನು 'ಉತ್ಪಾದನೆ'ಯ ಹಂತದಿಂದ ಆರ್ಥಿಕ ಚಟುವಟಿಕೆಯ ಚೌಕಟ್ಟಿನಿಂದ ಹೊರಗಿಡುವ ಪ್ರಯತ್ನಗಳು ನಡೆಯುತ್ತಿವೆ ವ್ಯವಸಾಯದ ಆಧುನಿಕತೆ, ಕಾಡುಗಳ ವಾಣಿಜ್ಯೋದ್ಯಮ ನೀರಿನ ಸಂಪನ್ಮೂಲದ ಖಾಸಗೀಕರಣ ಇವು ಹೆಂಗಸಿನ ಉತ್ಪಾದನಾ ಸಾಮರ್ಥ್ಯದ ಮೇಲೆ ಋಣಾತ್ಮಕ ಪ್ರಭಾವ ಬೀರುತ್ತವೆ. 'ಹಸಿರು ಕ್ರಾಂತಿ'ಯಂತಹ ಚಳುವಳಿಯ ತಂತ್ರಕೂಡಾ ಹೆಂಗಸರ ಸಾಂಪ್ರದಾಯಿಕ ಪಾತ್ರವಾದ ಬೀಜಗಳ ಸಂಗ್ರಹಣೆ, ಕಾಯ್ದಿರುಸುವಿಕೆ, ಸ್ಥಳೀಯ ಮಾರುಕಟ್ಟೆಯ ಮೇಲಿನ ಹಿಡಿತ ಇಂತಹವುಗಳನ್ನು ನಾಶಮಾಡಿವೆ. ವಾಣಿಜ್ಯ ಬೆಳೆಯ ಆರ್ಥಿಕ ನೀತಿಯಿಂದಾಗಿ ಪುರುಷ ಕೇಂದ್ರಿತ ಮಾರುಕಟ್ಟೆಯಾಗತೊಡಗಿದೆ. ಹೆಂಗಸರು ಪರಿಸರಕ್ಕೆ ಅನುಗುಣವಾಗಿ ಹೊಂದಿದ ನೈಪುಣ್ಯಗಳು ಮಾಲೆ ಗುಂಪಾಗಿ ಬಿಡುತ್ತವೆ. ಪೋಷಿಸುವಿಕೆಯ ಜೀವನಾಧಾರದ ತತ್ವವನ್ನು ಮುಖ್ಯವಾಗಿ ಹೊಂದಿರುವ 'ಉತ್ಪಾದನೆ'ಯನ್ನು ಅಭಿವೃದ್ಧಿಯ ದೃಷ್ಟಿಕೋನದ ಮುಖ್ಯ ಗುರಿಯಾಗಬೇಕಾಗುತ್ತದೆ.

ವಾಣಿಜ್ಯ ಬೆಳೆಗಳಿಗೆ ಬೇಡಿಕೆ ಜಾಸ್ತಿಯಾಗುತ್ತಾ ಹೋಗುವ ಸಂದರ್ಭದಲ್ಲಿ ಕಾಡುಗಳ ಬಗ್ಗೆ ಸರ್ಕಾರದ ಯೋಜನೆಗಳು ಕೂಡಾ ಭಿನ್ನವಾಗುತ್ತಿವೆ. ಉತ್ತಮ ಕಟ್ಟಿಗೆ, ಗಿಡ, ಮರಗಳಿಗಿಂತ ವಾಣಿಜ್ಯೋದ್ಯಮದ ಗಿಡ ಮರಗಳಿಗೆ ಹೆಚ್ಚು ಗಮನವೀಯಲಾಗುತ್ತಿದೆ. ಸೌದೆಗೆ, ಹುಲ್ಲಿಗೆ, ಇಂಧನಕ್ಕೆ ಕಾಡುಗಳನ್ನೇ ನಂಬಿರುವ ಹೆಂಗಸರು ಜೀವನಾಧಾರ ಸಂಪನ್ಮೂಲ ಕಳೆದುಕೊಂಡು ದುಸ್ಥಿತಿಗಿಳಿಯಬೇಕಾಗುತ್ತದೆ. ಹೆಂಗಸರ ಅವಶ್ಯಕತೆಗಳು ಸಂಪೂರ್ಣವಾಗಿ ನಿರ್ಲಕ್ಷಿಸಲ್ಪಡುತ್ತವೆ. ಅವರ ಉದ್ಯೋಗ ಅವಕಾಶಗಳೂ ಕಸಿದುಕೊಳ್ಳಲ್ಪಡುತ್ತವೆ. ಹೀಗಾಗಿ ವಿಕೇಂದ್ರೀಕರಣ, ನೇರ ಪ್ರಜಾಪ್ರಭುತ್ವ, ಜೀವನಾಧಾರತೆ ಸಮಾನತೆ ಇವು ಅಭಿವೃದ್ಧಿ ದೃಷ್ಟಿಕೋನದ ಮೂಲ ಗ್ರಹಿಕೆಗಳಾಗಬೇಕಾಗುತ್ತದೆ. ಪರಿಸರದ ಜೊತೆ ಮಹಿಳೆಗಿರುವ ಅವಿಭಾಜ್ಯ ಆತ್ಮೀಯ ಸಂಬಂಧವನ್ನು ಯೋಜನಾಗಾರರು ಹೊಂದಿರಬೇಕಾಗುತ್ತದೆ. 'ಚಿಪ್ಕೋ' ಚಳುವಳಿ ನಡೆದು ಈ ಪ್ರಮಾಣದಲ್ಲಿ ಎಲ್ಲರ ಗಮನ ಸೆಳೆಯದಿದ್ದಲ್ಲಿ ಬಹುಶಃ ಮಹಿಳೆಗೆ ಪರಿಸರದೊಡನಿರುವ ಸಂಬಂಧ ಅರ್ಥವೇ ಆಗುತ್ತಿರಲಿಲ್ಲವೇನೋ? 'ಚಿಪ್ಕೋ' ಚಳುವಳಿ-ಹೆಂಗಸಿನ ಜೀವನಾಧಾರದ ಆರ್ಥಿಕತೆಯ ಮೇಲೆ ಒತ್ತು ನೀಡಿದುದಲ್ಲದೇ ಗ್ರಾಮಾಂತರ ಮಹಿಳೆಯರ ಭರವಸೆ, ನಂಬಿಕೆಗಳನ್ನು ಬೆಳಕಿಗೆ ತಂದಿತು.

(ಸೀಮಾ ಕುಲಕರ್ಣಿ; ನಳಿನಿ ನಾಯಕ, ಗೇಲ್ ಆಮ್‌ವೆಟ್; ವಿಜಿ ಶ್ರೀನಿವಾಸನ್, ಆಭಾ; ಇಂದು ಪ್ರಕಾಶ್ ಸಿಂಗ್; ಸುರಾ ಅಹಮ್ಮದ್ ಇಂದಿರಾದೇವಿ, ವನಜಾರಾಣಿ.)

## 6. ಹಿಂಸಾಚಾರ ಮತ್ತು ಸಮುದಾಯ

ರಾಚನಿಕ ಹೊಂದಾಣಿಕೆಗಳ ಸಂದರ್ಭದಲ್ಲಿ ಹೆಂಗಸರ

ಮೇಲೆ ನಡೆಯುವ ಹಿಂಸೆಗಳು ಹೆಚ್ಚುತ್ತಿವೆ. 89ರಲ್ಲಿ ಭಾರತದ ಮಹಿಳಾ ಚಳುವಳಿ ವರದಕ್ಷಿಣೆ, ಅತ್ಯಾಚಾರ ಮುಂತಾದ ಸಮಸ್ಯೆಗಳ ಸುತ್ತ ಹೋರಾಡಿ ಹಲವಾರು ಕಾನೂನುಗಳ ಬದಲಾವಣೆ ಕಾರಣವಾಗಿದೆ. ಹಿಂಸಾಚಾರ ದೈಹಿಕವಾದುದ್ದು ನಿಜವಾದರೂ ಬಡತನದ ಹಿಂಸೆ, ನೆಲೆ ಇರದ ಹಿಂಸೆ, ಕೀಳುಜಾತಿಯಾಗಿರುವ ಹಿಂಸೆ, ಅಸ್ಪೃಶ್ಯತೆಯ ಹಿಂಸೆ. ಹಿಂಸೆಗೆ ಹೀಗೆ ನಾನಾ ಮುಖಗಳಿವೆ. ರಾಜ್ಯ, ಸರ್ಕಾರ ಪ್ರಭುತ್ವ, ರಾಜ್ಯದ ರಾಜಕೀಯ ಈ ಎಲ್ಲಾ ವಲಯಗಳಿಗೂ ಮಹಿಳೆ ಹಿಂಸೆಯ ಸನ್ನಿವೇಶದಲ್ಲಿ ಮುಖಾ ಮುಖಿಯಾಗಬೇಕಾಗುತ್ತದೆ.

ಹೆಂಡತಿಯನ್ನು ಹೊಡೆಯುವುದು ಇತ್ತೀಚಿನ ದಿನಗಳಲ್ಲಿ ಹೆಚ್ಚಾಗುತ್ತಿದೆ. ಗಂಡನ ಬಳಿ ಹಣ, ಗೌರವದ ಕೊರತೆಯಿದ್ದಾಗ ಹೆಂಡತಿಯನ್ನು ಹೊಡೆಯುತ್ತಾನೆ. ಗಂಡನ ಮೇಲೆ ಪೂರ್ಣ ಅವಲಂಬಿತವಾಗಿರುವವರು ಹೊಡೆತಕ್ಕೆ ಬಲಿಯಾಗುತ್ತಾರೆ. ಒಪ್ಪಂದ ಮಾಡಿಕೊಳ್ಳಲೊಪ್ಪದ, ಪ್ರಶ್ನೆ ಕೇಳುವವರು ಇದಕ್ಕೆ ಬಲಿಯಾಗುತ್ತಾರ

ಇತ್ತೀಚಿನ ದಿನಗಳಲ್ಲಿ ಚಿಕ್ಕ ಹುಡುಗಿಯರ ಮೇಲೆ ತರುಣಿಯರ ಮೇಲೆ ಈ ಹಿಂಸೆಗಳು ಹೆಚ್ಚಾಗಿ ನಡೆಯುತ್ತವೆ. ಅವರು ಕೊಲೆಗೀಡಾಗುತ್ತಿದ್ದಾರೆ, ಸಂಬಂಧ ಹೊಂದಿರುವ ಅಥವಾ ಹೊಂದಲು ತಿರಸ್ಕರಿಸುವ ಹಂತದಲ್ಲಿ ಇವರು ಕೊಲೆಗೀಡಾಗುತ್ತಾರೆ. **'ಎಷ್ಟು ಧೈರ್ಯ ನಿನಗೆ ಇಲ್ಲವೆನ್ನಲು'** ಎಂಬ ಪೊಗರಿನ ಹಿನ್ನಲೆಯಲ್ಲಿಯೇ ಅನೇಕ ತರುಣಿಯರು, ಚಿಕ್ಕ ಹುಡಗಿಯರು ಕೊಲೆಗೀಡಾಗುವುದನ್ನು ಕಾಣುತ್ತೇವೆ. ಹೊಸ ಆರ್ಥಿಕ ನೀತಿಯಿಂದಾಗಿ ಗಂಡು ಆರ್ಥಿಕತೆಯ ಕೇಂದ್ರ ಬಿಂದುವಾಗುತ್ತಾನೆ. ಹೆಣ್ಣಿನ ವಿಧೇಯತೆ ಬಯಸುತ್ತಾ ಹಿಂಸಚಾರದತ್ತ ಮುಖ ಮಾಡುತ್ತಾ ಹೋಗುತ್ತಾನೆ. ನಗರೀಕರಣ ಹೊಂದಿದ ಪ್ರದೇಶಗಳಲ್ಲಿ ಈ ಹಿಂಸಾಚಾರಗಳು ಹೆಚ್ಚಿನ ಮಟ್ಟದಲ್ಲಿ ನಡೆಯುತ್ತವೆ. ವಿಧೇಯತೆ, ಗುಲಾಮತನವನ್ನು ಪುರುಷ ಪ್ರಧಾನ ಸಮಾಜದಲ್ಲಿ ಸ್ಪಷ್ಟ ಪಡಿಸುವ ವಿಧಾನವೇ ಹಿಂಸಾಚಾರ.

ಕೋಮುವಾದ ನೇರವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯ ಮೇಲೆ ಹಿಂಸೆಯನ್ನು ಪ್ರಚೋದಿಸುತ್ತದೆ. ಕೋಮುವಾದೀ ಸಂಸ್ಥೆಗಳು ಮಹಿಳಾ ಪ್ರಶ್ನೆಗಳ ನೆತ್ತುತ್ತಲೇ ಮಹಿಳೆಯರ ಹಕ್ಕು ಕಸಿದುಕೊಳ್ಳುತ್ತವೆ.

ಕಾನೂನುಗಳು ಮಹಿಳೆಯರ ಹಿಂಸಾಚಾರದ ಸಂದರ್ಭಗಳನ್ನು ಗುರುತಿಸುವಲ್ಲಿ ಸೋಲುತ್ತವೆ. ಹಿಂಸೆಗೊಳಗಾದ ಹೆಂಗಸಿನ 'ಸತ್ಯ', 'ಒತ್ತಡ'–ಕಾನೂನಿನ ಚೌಕಟ್ಟಿನೊಳಗೆ ಬರುವುದಿಲ್ಲ. ವೈದ್ಯಕೀಯ ಸಾಕ್ಷಿ, ಇತರ ಸಾಕ್ಷಿಗಳೇ ಮುಖ್ಯವಾಗಿ ಬಿಡುತ್ತವೆ. ಕಾನೂನಿನ ಚೌಕಟ್ಟಿನ ಪ್ರತಿಕ್ರಿಯೆ ಆಕೆಯ ಸತ್ಯವನ್ನೇ ಮರೆಸಿ ಬಿಡುತ್ತವೆ.

(ಬಿಂದಾ ಕರಾತ, ಇಂದು ಅಗ್ನಿಹೋತ್ರಿ; ಪ್ರೇಮಾ ಚೌಧರಿ; ಶೃತಿ ಚಾಂಬೆ; ನೈನಾ ಕಪೂರ್, ಶೃತಿಸಿಂಗ್; ನಹೀದಾ ಶೇಕ್).

## 7. ಮಧ್ಯಪಾನ ವಿರೋಧಿ ಹೋರಾಟ

ಈ ಹೋರಾಟ ನಡೆದುದು ಆಂಧ್ರಪ್ರದೇಶದ ಹಳ್ಳಿಗಾಡು ಹೆಂಗಸರಿಂದ. ನೆಲ್ಲೂರು ಜಿಲ್ಲೆಯ ಮುಬಗಂಟು ಆಂಧ್ರಪ್ರದೇಶದ ಚಿಕ್ಕಹಳ್ಳಿ, 'ವಯಸ್ಕರ ಶಿಕ್ಷಣ ತರಬೇತಿಯ' ಯೋಜನೆಯಲ್ಲಿ ಅಕ್ಷರ ಕಲಿತ ಹೆಂಗಸರು ಅವರಿಗಿದ್ದ ಸೀತಮ್ಮನ ಪಾಠದಿಂದ ಸ್ಫೂರ್ತಿಗೊಂಡರು. ಸರಾಯಿ ಮಾರಾಟದ ವಿರುದ್ಧ ಹೋರಾಟ ಪ್ರಾರಂಭಿಸಿದರು. ಈಗ ಇಡಿಯ ಆಂಧ್ರವನ್ನೇ ಈ ಹೋರಾಟ ಸುತ್ತಿಕೊಂಡಿದೆ. (ಭವಾನಿ, ಮೆಹಮರ್, ಸೂರ್ಯಮನಿ).

## 8. ರಾಜಕೀಯ ರಚನೆಗಳು ಮತ್ತು ಹಂತಗಳು

ಪಂಚಾಯುತ್ ರಾಜ್ಯ ವ್ಯವಸ್ಥೆಯಲ್ಲಿ ಹುಲ್ಲು, ನೀರು ಕಟ್ಟಿಗೆಯಂತಹ ಸಂಪನ್ಮೂಲಗಳ ವ್ಯವಸ್ಥಾಪಕತೆಯನ್ನು ನೋಡಿಕೊಳ್ಳುವ ಹಕ್ಕು ಲಭಿಸಿದರೆ ವಿಕೇಂದ್ರಿಕರಣ ಜಾರಿಗೆ ಬರಬಹುದು. ಅಭಿವೃದ್ಧಿ ನೀತಿಯನ್ನು ರೂಪಿಸಲು ಹಳ್ಳಿಯ ಜನರ, ಗ್ರಾಮ ಸಭೆಗಳ ಹಾಗೂ ಪಂಚಾಯುತಿಗಳ ಸಹಭಾಗಿತ್ವ ಪಡೆಯಬೇಕು. ಮಹಾರಾಷ್ಟ್ರದಲ್ಲಿ ಮಹಿಳಾ ಪಂಚಾಯಿತಿಗಳು ತೆಗೆದುಕೊಂಡ ಸಮಸ್ಯೆಗಳು ಅವರ ಅಗತ್ಯಗಳಿಗೆ ಅನುಗುಣವಾದವು, ಹಾಗೂ ಪರಿಸರದ ಸಮತೋಲನ ಕಾಯುವಂತಹವು. ಕಾರ್ಮಿಕ ಸಂಘಗಳಲ್ಲಿ ಸ್ತ್ರೀಯ ಧ್ವನಿ ಕೇಳದಂತೆ ಆಗಿಬಿಟ್ಟಿದೆ. ಇಂದು ರಾಜಕೀಯದ ಎಲ್ಲಾ ಕ್ಷೇತ್ರಗಳಲ್ಲೂ ಕಾಣಿಸಿಕೊಳ್ಳುವ ಅಗತ್ಯ ಇದೆ. ಅಭಿವೃದ್ಧಿಯ ಪಥವನ್ನೇ ಬದಲಾಯಿಸುವ ಅಗತ್ಯ ಇದೆ.

ಇದಲ್ಲದೇ ಸಂಕಿರಣದಲ್ಲಿ ಇಂದಿನ ಕೋಮುವಾದದ ಸಂದರ್ಭದಲ್ಲಿ ನಮ್ಮ ಚರಿತ್ರೆಯನ್ನು, ಧರ್ಮಗಳನ್ನು ಅರ್ಥವತ್ತಾಗಿ ಶೋಧಿಸುವ ಅಗತ್ಯದ ಬಗ್ಗೆ ವಿಜಯಾ ದಬ್ಬೆಯವರು ಮಾತನಾಡಿದರು.

# ಜಗದ್ಗುರು ಮಾತೆ ಮಹಾದೇವಿ ಹಾಗೂ ಅವರ ಸಾಹಿತ್ಯ ಕೃತಿಗಳು

**ಪ್ರೇಮಾವತಿ, ಹೊಸಕೊಪ್ಪ**

ಬಸವಣ್ಣನವರ ಮಾನವ ಧರ್ಮದ ಮೂಲತತ್ವಗಳನ್ನು ಪ್ರಚಾರ ಮಾಡುವುದೇ ಮಾತೆ ಮಹಾದೇವಿಯವರ ಪ್ರವಚನಗಳ ಮುಖ್ಯಗುರಿ. ಕೋಮುವಾದದ ಅಶಾಂತಿಯ ಹಿನ್ನೆಲೆಯಲ್ಲಿ ಇವರ ಪ್ರವಚನಗಳು ಜನತೆಗೆ ಹತ್ತಿರವಾಗುತ್ತವೆ. ಅಜ್ಞಾನ, ಅಶಾಂತಿ, ಆವೇಶ, ಮೂಢನಂಬಿಕೆ, ಅಂಧಶ್ರದ್ಧೆಗಳಿಂದ ಆವೃತ್ತವಾಗಿರುವ ಜನತೆಗೆ ಒಂದು ಮುಕ್ತ, ಪ್ರಬುದ್ಧ ತಿಳುವಳಿಕೆ, ಇಲ್ಲವೆ ಧಾರ್ಮಿಕ ಜ್ಞಾನ ಅತೀ ಅವಶ್ಯಕವಾಗಿವೆ. ದೇವರು, ಧರ್ಮ ಮಂದಿರಗಳು, ಮಸೀದಿಗಳ ಗಲಭೆಗಳಲ್ಲಿ ನೈಜವಾದ ಧಾರ್ಮಿಕ ತಿಳುವಳಿಕೆ ಅತೀ ಅಗತ್ಯ. ಬಸವಣ್ಣನವರ ಸರಳ ಧಾರ್ಮಿಕ ತತ್ವಗಳು ಗೊಂದಲು, ಗೋಜಲಾದ ಮನಸ್ಸಿಗೆ ಉತ್ತರ ನೀಡಬಲ್ಲವು. ಬಸವಣ್ಣನವರು ಮೂರ್ತಿಪೂಜೆಯನ್ನು ಖಂಡಿಸುತ್ತಾರೆ. ಕಾಯಕಧ ಮೂಲಕ ಜಾತಿಯನ್ನು ಪಡೆದ ಮನುಜ ಲಿಂಗ ದೀಕ್ಷೆಯಿಂದ ಆತ್ಮೋನ್ನತಿಗೆ ಪ್ರಯತ್ನಿಸಬಹುದು. ಆತ್ಮಲಿಂಗ ಪೂಜೆಯೇ ದೈವ ಸಾಕ್ಷಾತ್ಕಾರ ಸಾಧನ. ಇಂತಹ ಸರಳ ವಿಚಾರಗಳನ್ನು ಮಾತೆ ಮಹಾದೇವಿ ತಮ್ಮ ಪ್ರವಚನಗಳಲ್ಲಿ ಸ್ಪಷ್ಟಪಡಿಸುತ್ತಾರೆ. ಇಂದು ಧರ್ಮದ ಹೆಸರಿನಲ್ಲಿ ಮಠಾಧಿಪತಿಗಳು ಜನತೆಗೆ ನಿಜವಾದ ಧಾರ್ಮಿಕ ತತ್ವಗಳನ್ನು ನೀಡುವಲ್ಲಿ ಸೋತಿದ್ದಾರೆ. ಅಡ್ಡಪಲ್ಲಕ್ಕಿ ಏರುವ, ಚಿನ್ನದ ಕಿರೀಟ ಧರಿಸುವ ಮಠಾಧಿಪತಿಗಳನ್ನು ಮಾತೆ ಮಹಾದೇವಿ ವಿಡಂಬನೆ ಮಾಡುತ್ತಾರೆ. ದೇವರು ಧರ್ಮದ ಬಗ್ಗೆ ನಿಜವಾದ ಮೌಲ್ಯಗಳನ್ನು, ನಂಬಿಕೆಗಳನ್ನು ಜನರಲ್ಲಿ ನಾವು ತುಂಬ ಬೇಕಾಗಿದೆ. ಹೊಗಳಿಕೆ, ತೆಗಳಿಕೆ ಮಠಾಧಿಪತ್ಯಗಳಲ್ಲಿ ನಂಬಿಕೆ ಇರುವವರು ನಾವಲ್ಲ. ಮತಾಂಧತೆಯಲ್ಲಿ ನಂಬಿಕೆ ಇರುವವರು ನಾವಲ್ಲ. ಆತ್ಮೋದ್ಧಾರಕ್ಕಾಗಿ ಪೂಜೆ, ಪುನಸ್ಕಾರ, ಜಪತಪಗಳಲ್ಲಿ ನಂಬಿಕೆ ಇರುವವರು ನಾವು. ಧರ್ಮಕ್ಕೆ ಯಾವಾಗ ಜನ ಒಲಿಯುವುದಿಲ್ಲವೋ ಆಗ ಲಿಂಗಾನಂದ ಸ್ವಾಮಿಗಳು ಹೇಳುವ ಹಾಗೆ–ಧರ್ಮವನ್ನೇ ಜನರ ಕಡೆಗೆ ಒಯ್ಯಬೇಕಾಗುತ್ತದೆ. ಜನರಿಗೆ ಧರ್ಮ ಬೇಕು. ಅದು ಮತಾಂಧತೆಯ ಮೂಢ ನಂಬಿಕೆಯ ಧರ್ಮವಲ್ಲ. ಇನ್ನೊಬ್ಬರನ್ನು ಕಡಿ_ಬಡಿ ಎನ್ನುವ ಧರ್ಮವಲ್ಲ. ಸಹನೆಯ ಧರ್ಮ, ಇನ್ನೊಬ್ಬರನ್ನು ಸಹಿಸಿಕೊಳ್ಳುವ ಧರ್ಮ. ನಮಗಾಗಿ ಇನ್ನೊಬ್ಬರಿಗಾಗಿ ಇರುವ ಧರ್ಮ ಮೂಢ, ನಂಬಿಕೆಗಳ ಬಗ್ಗೆ ಹೇಳುತ್ತಾ ಮಾತೆ ಮಹಾದೇವಿಯವರು ಒಂದು ಒಳ್ಳೆಯ ಉದಾಹರಣೆಗೆ ಕೊಡುತ್ತಾರೆ. ಶ್ರಾದ್ಧದಲ್ಲಿ ಪಿಂಡ ಹಾಕಿದಾಗ ಕಾಗೆ ಬಂದು ಮುಟ್ಟಿದರೆ ಸತ್ತವರ ಆತ್ಮಕ್ಕೆ ಶಾಂತಿ ಸಿಗುತ್ತದೆ ಎಂದು ಕಾಗೆಗಾಗಿ ಕಾಯುತ್ತಾರೆ. ಅದೇ ಕಾಗೆ ಯಾವಾಗಲಾದರೂ ಮನೆ ಒಳಗೆ ಹೊಕ್ಕರೆ ಕೆಡಕು ಎನ್ನುತ್ತಾರೆ. ಒಂದಗುಳು ಅನ್ನ ಸಿಕ್ಕರೆ ಕಾಗೆ 'ಕಾ ಕಾ' ಎಂದು ತನ್ನ ಬಳಗವನ್ನೆಲ್ಲ ಕರೆದು ತಿನ್ನುತ್ತದೆ. ಇಂತಹ ಗುಣ ಇರುವ ಕಾಗೆ ಅಪಶಕುನದ ಪಕ್ಷಿಯಲ್ಲ ಎನ್ನುತ್ತಾರೆ. ಮೌಢ್ಯತೆ ಇರುವುದು ನಮ್ಮ ನಮ್ಮ ತಿಳುವಳಿಕೆ ಮತ್ತು ಆಚರಣೆಗಳಲ್ಲಿ, ಧರ್ಮಾಂಧತೆ, ಆಸ್ತಿಕ–ನಾಸ್ತಿಕ ಎನ್ನುವ ಗೊಂದಲಗಳಲ್ಲಿ ಒಂದು ಸರಳ ತತ್ವಗಳ ಅವಶ್ಯಕತೆ ನಮ್ಮ ಜನತೆಗೆ ಬೇಕಾಗಿದೆ. ಇಂತಹ ಸರಳ ತತ್ವಗಳನ್ನು ಮಾತೆ ಮಹಾದೇವಿಯವರು ತಮ್ಮ ಪ್ರವಚನಗಳಲ್ಲಿ ಪ್ರಚುರ ಪಡಿಸುತ್ತಾರೆ:

ಧಾರ್ಮಿಕ ವಿಚಾರಗಳ ಹಿನ್ನೆಲೆಯಲ್ಲಿ ಮಾತೆ ಮಹಾದೇವಿಯವರ ಒಂದು ಮುಖದ ವ್ಯಕ್ತಿತ್ವ ಗೋಚರವಾದರೆ, ಸಾಹಿತ್ಯ ಕೃತಿಗಳ ಮೂಲಕ ಅವರ ಇನ್ನೊಂದು ವ್ಯಕ್ತಿತ್ವದ ದರ್ಶನವಾಗುತ್ತದೆ. ಸಾಮಾನ್ಯ ಜನತೆಗೆ ಹತ್ತಿರವಾದ ಕಾದಂಬರಿ ಪ್ರಕಾರದಲ್ಲಿ ತಮ್ಮ ಕೃತಿಗಳನ್ನು ರಚಿಸಿದ್ದಾರೆ. 'ಹೆಪ್ಪಿಟ್ಟ ಹಾಲು' ಅವರ ರಾಜ್ಯ ಪ್ರಶಸ್ತಿ ವಿಜೇತ ಕಾದಂಬರಿ. ಹೆಣ್ಣು ಒಂದು ಉನ್ನತ ಸ್ತರವನ್ನು ಏರಬೇಕಾದರೆ ಅಡೆತಡೆಗಳು ಅನೇಕ. ಆಕೆ ತನ್ನ ಎಲ್ಲಾ ಬಂಧನಗಳನ್ನೂ ದಾಟಬೇಕು. ಮುಖ್ಯವಾಗಿ ಆತ್ಮ ಸ್ಥೈರ್ಯಬೇಕು, ತಂದೆ ತಾಯಿಗಳ ಬಂಧನ ಸಮಾಜದಲ್ಲಿನ ರೂಢಿಗತ ಸಂಪ್ರದಾಯಗಳಿಂದ ತಪ್ಪಿಸಿ

ಕೊಳ್ಳುವುದು ಅಸಾಧ್ಯ. ಅಂತೆಯೇ 'ಹೆಪ್ಪಿಟ್ಟ ಹಾಲು' ಕಾದಂಬರಿಯ ಕಥಾನಾಯಕಿ ಆಧ್ಯಾತ್ಮ ಜೀವನದಲ್ಲಿ ಸಾಧನೆ ಮಾಡಬೇಕೆನ್ನುವ ಮಹತ್ವಾಕಾಂಕ್ಷಿ.... ಆದರೆ ಅಕ್ಕ ಮಹಾದೇವಿಯ ಹಾಗೆ ತನ್ನೆಲ್ಲ ಬಂಧನಗಳನ್ನು ಕಳಚಿಕೊಳ್ಳುವ ಆತ್ಮಸ್ಥೈರ್ಯ ಇಲ್ಲದವಳು. ತಂದೆ-ತಾಯಿ ತನಗಿಷ್ಟವಿಲ್ಲದ ವರನೊಡನೆ ಮದುವೆ ನಿಶ್ಚಯಿಸಿದಾಗ ಅನಿವಾರ್ಯವಾಗಿ ಕಾಲೇಜು ಅಧ್ಯಾಪಕ ನಿರಂಜನರ ಕೈ ಹಿಡಿದು ಬೆಂಗಳೂರಿಗೆ ಬರುತ್ತಾಳೆ. ಲೌಕಿಕ ಬದುಕಿನಲ್ಲಿದ್ದೇ ಆಧ್ಯಾತ್ಮಜೀವಿಯಾಗುವ ಆಶ್ವಾಸನೆಯೊಂದಿಗೆ ಜೀವನ ಆರಂಭಿಸುತ್ತಾಳೆ. ಆದರೆ ವರ್ಷಗಳುರುಳಿದಾಗ ಸಾಂಸಾರಿಕ ಬದುಕಿನಲ್ಲಿ ಶಿವನ ಮಾಸಲು ಸಲೆಯಾಗಲು ಸಾಧ್ಯವಿಲ್ಲ ಎಂಬ ಅರಿವು ಮೂಡಿ ದಾರಿ ತಪ್ಪಿ ಹೊರಟ ನಿರಂಜನನನ್ನು ಸರಿಪಡಿಸಲು ತನ್ನ ಸಕಲವನ್ನು ಅರ್ಪಿಸಿ ಗಂಡನೇ ದೇವರು ಎಂಬ ಭಾವನೆ ತಾಳುತ್ತಾಳೆ. ಆದರೆ ಅವಳ ತ್ಯಾಗವನ್ನೂ, ಪರಿಪೂರ್ಣತೆಯನ್ನೂ ಅರ್ಥೈಸಿಕೊಳ್ಳದೆ ಅವಳ ಪತಿ ಬೇರೊಂದು ಭ್ರಮರಕ್ಕೆ ಹಾರಿದಾಗ ಚಿತ್ತಭ್ರಮಣೆಗೊಳಗಾಗುವ ಕಲ್ಯಾಣಿ ಡಾ॥ ರಾಜನ್‌ರಿಂದ ಪುನರ್ಜನ್ಮ ಪಡೆದು ವೈಯಕ್ತಿಕ ಬದುಕನ್ನು ಮೆಟ್ಟಿ ನಿಂತು ಮಾತೆಯಾಗಿ, ಯೋಗಿಣಿಯಾಗಿ ತನ್ನನ್ನು ಸಮಾಜಕ್ಕೆ ಅರ್ಪಿಸಿಕೊಳ್ಳುತ್ತಾಳೆ. ಹೆಣ್ಣಿನ ಮಾನಸಿಕ ವೇದನೆ-ಸಂವೇದನೆಗಳನ್ನು ಅತ್ಯಂತ ಸೂಕ್ಷ್ಮವಾಗಿ, ಸಮರ್ಪಕವಾಗಿ ಮಾತೆ ಮಹಾದೇವಿಯವರು ವಿಶ್ಲೇಷಿಸುತ್ತಾರೆ. ಆಧ್ಯಾತ್ಮಿಕ ಚಿಂತನೆಗಳನ್ನು ಬಿಚ್ಚಿಡುವ ವಿಚಾರವಂತಿಕೆ ಆಧ್ಯಾತ್ಮ ಜಗತ್ತಿನಲ್ಲಿರುವ ಮಾತೆ ಮಹಾದೇವಿಯಂತಹವರಿಂಧ ಮಾತ್ರ ಸಾಧ್ಯ. ಲೌಕಿಕ-ಆಧ್ಯಾತ್ಮಿಕ ಬದುಕಿನ ವಿಶ್ಲೇಷಣೆ ಮೆಚ್ಚಿಗೆಗೆ ಅರ್ಹವಾಗುವುದು ಬದುಕಿನ ಸಾತ್ವಿಕ ವಿಚಾರಗಳನ್ನು ಜನತೆಯ ಚಿಂತನೆಯ ಒರೆಗಲ್ಲಿಗೆ ಹಚ್ಚುತ್ತದೆ ಎನ್ನುವುದಕ್ಕಾಗಿ.

'ಹೆಪ್ಪಿಟ್ಟ ಹಾಲು' ಕಾದಂಬರಿಯ ಯಶಸ್ಸಿನಿಂದಾಗಿ ಮಾತೆ ಮಹಾದೇವಿಯವರಿಂದ ಹೊರಬಂದ ಬೃಹತ್ ಕಾದಂಬರಿ ಅಕ್ಕಮಹಾದೇವಿಯ ಜೀವನ ಚರಿತ್ರೆ 'ತರಂಗಿಣಿ'. ಮಾತೆ ಮಹಾದೇವಿಯವರೇ ಹೇಳುವ ಹಾಗೆ ಈ ಕಾದಂಬರಿ ಹನ್ನೆರಡನೇ ಶತಮಾನದಲ್ಲಿ ಆಗಿ ಹೋದ ಐತಿಹಾಸಿಕ ವ್ಯಕ್ತಿಯೋರ್ವಳ ಸಾಹಿತ್ಯಕ ಚಿತ್ರಣ ಮಾತ್ರವಲ್ಲ ; ಬದುಕನ್ನು ಪಲ್ಲಟಿಸಿಕೊಂಡು ಅಸಮಾನ್ಯ ಯೋಗಿಕ ಗುರಿಯನ್ನು ಮುಟ್ಟಿದ ಶಿವಯೋಗಿಣಿ ಅಕ್ಕ ಮಹಾದೇವಿಯನ್ನು ಕುರಿತದ್ದು. ಮರ್ತ್ಯ ಮಟ್ಟದಲ್ಲಿ ಉಗಮಿಸಿ ಅಮರ್ತ್ಯ ಮಟ್ಟದಲ್ಲಿ ಸಮಾಗಮಗೊಳ್ಳುವ ಆ ತಾಯಿಯ ವ್ಯಕ್ತಿತ್ವವು ಬಹುಮುಖವಾದುದು. ಆಕೆ ಅನುಭಾವಿ, ತತ್ವಜ್ಞಾನಿ, ಯೋಗಿಣಿ, ಸಾಹಿತಿ, ಕ್ರಾಂತಿಕಾರಿಣಿ, ಸ್ವತಂತ್ರ ವಿಮರ್ಶಾ ಪ್ರಜ್ಞೆಯುಳ್ಳವಳು. ಇಂತಹ ಮಹಾವ್ಯಕ್ತಿತ್ವವು ರೂಪುಗೊಂಡು ಪರಿ, ವಿವಿಧ ಹಂತಗಳಲ್ಲಿ ಆಕೆಯ ಮನಸ್ಸು ಹಾಯ್ದು ಬಂದ ಸ್ತರ, ಎದುರಿಸಿದ ಪರಿಸರ–ಇವುಗಳನ್ನು ಚಿತ್ರಿಸಲು ಬಹುದೊಡ್ಡ ಭಿತ್ತಿಯೇ ಬೇಕಾಯಿತು. ಆದರಿಂದಾಗಿ ಕಾದಂಬರಿ ಬೃಹತ್ ಗಾತ್ರ ಪಡೆಯಿತು. ನೂರಾರು ವರ್ಷಗಳಿಂದ ಶೂದ್ರತ್ವ, ಪುರುಷದಾಸ್ಯ, ಮಾಯೆತನ, ಕೀಳರಿಮೆ ಇವುಗಳ ಬೇಗೆಯಲ್ಲಿ ದಹಿಸಲ್ಪಟ್ಟ ಸ್ತ್ರೀ ಕುಲಕ್ಕೆ ಆತ್ಮವಿಶ್ವಾಸದ ಅಮೃತವೆರೆದ ವಿರಾಗಿಣಿ ಅಕ್ಕಮಹಾದೇವಿ.

ಉಡುತಡಿಯ ಸದ್ಗೃಹಸ್ಥರಾದ ಓಂಕಾರಶೆಟ್ಟಿ ಮತ್ತು ಲಿಂಗಮ್ಮನ ಮಗಳಾಗಿ ಮಹಾದೇವಿ ಜನಿಸುತ್ತಾಳೆ. ಗುರುಲಿಂಗದೇವರ ತಪಸ್ಸಿನ ಫಲವಾಗಿ ದಂಪತಿಗಳೀರ್ವರಲ್ಲಿ ಚೇತನಗೊಂಡ ದಿವ್ಯತ್ವ ಮಹಾದೇವಿಯದು. 'ಕಾರಣಿಕ ಕನ್ಯೆ' ಎಂದೇ ಶೋಭಿತಳಾದವಳು. ಆದರೂ ಒಬ್ಬ ಹೆಣ್ಣಾಗಿ ರೂಢಿ ಸಂಪ್ರದಾಯಗಳಿಗೆ ಭಿನ್ನವಾದ ದಾರಿಯಲ್ಲಿ ಹೊರಟ ಮಹಾದೇವಿ ಎದುರಿಸಬೇಕಾದ ಸಮಸ್ಯೆಗಳು ಅನೇಕ. ತನ್ನ ದಾರಿಗಿದಿರಾದ ಹೆಣ್ಣಿನ ನಿರ್ಬಂಧಗಳನ್ನು ಪ್ರಶ್ನಿಸುತ್ತ, ಛಲದಿಂದ ದಾಟುತ್ತಾ ಬಂದ ದಿವ್ಯ ವ್ಯಕ್ತಿತ್ವ ಮಹಾದೇವಿಯದು. 'ಹೆಣ್ಣು ಮಗುವಿಗ್ಯಾಕೆ ಓದು' ಎನ್ನುವ ಕಾಲದಲ್ಲಿ ತಂದೆ ಮತ್ತು ಗುರುಗಳ ಪ್ರೋತ್ಸಾಹದಿಂದ ಮಠಕ್ಕೆ ಹೋಗಿ ಶಿಕ್ಷಣ ಕಲಿತು ಜ್ಞಾನಭಂಡಾರವಾದಳು.

'ಪ್ರತಿ ಮಾನವನ ನಿಲುವಿನಲ್ಲಿ ಹೆಣ್ಣಿರಲಿ, ಗಂಡಿರಲಿ, ಕ್ರಿಯಾತ್ಮಕ-ಬೌಧ್ಯಾತ್ಮಕ-ಭಾವತ್ಮಕ ಮೂರು ಮುಖಗಳಿರುವುದು ಸಹಜ. ಇಂತಹ ಶಿಕ್ಷಣ ಹೆಣ್ಣು ಮಕ್ಕಳಿಗೆ ಬೇಡವೆ ? ಎಂದು ಪ್ರಶ್ನಿಸುತ್ತಾ ಶ್ರೀ ಗುರುಲಿಂಗ ದೇವರ ಆಶ್ರಯದಲ್ಲಿ ಮಹಾದೇವಿ ಬೌದ್ಧಿಕ ಪ್ರಗತಿ ಹೊಂದಿದಳು.

ಮುಳ್ಳು ಕಲ್ಲುಗಳಿಂದ ಕೂಡಿದ ದಟ್ಟಾರಣ್ಯದಲ್ಲಿ ಮೊದಲ ಅಡಿಯಿಟ್ಟು ನಡೆಯುವವರಿಗೆ ಶ್ರಮ ಬಹಳ. ಹೊಸದನ್ನು ಹಿಡಿಯುವವರು ಸಮಾಜದ ಟೀಕೆಗಳಿಗೆ ಬಲಿಯಾಗಬೇಕು. ಹಾಗೆಯೇ ಮಹಾದೇವಿ ನಾನಾ ಟೀಕೆಗಳನ್ನು ಎದುರಿಸಬೇಕಾಯಿತು. ಆದರೆ 'ತೋರಲು ಹೆಣ್ಣು

ರೂಪಾದರೇನು ? ಭಾವಿಸಲು ಗಂಡುರೂಪು ನೋಡಾ' ಎಂಬ ವಿಲಕ್ಷಣ ಕೆಚ್ಚಿನಿಂದ 'ಚೆನ್ನಮಲ್ಲಿಕಾರ್ಜುನನ ಮೀಸಲು ಸತಿನಾನು' ಎಂಬ ತಾದತ್ಮ್ಯಭಾವದಿಂದ ತನ್ನದೇ ದಾರಿಯಲ್ಲಿ ಮುನ್ನಡೆದಳು.

ಬೂದಿಮುಚ್ಚಿದ ಕೆಂಡದಂತೆ ಲೌಕಿಕ ಬದುಕಿನಲ್ಲಿದ್ದೂ ಆಧ್ಯಾತ್ಮದ ಗಗನಕ್ಕೇರ ಬಯಸಿದ್ದ ಮಹಾದೇವಿ ಮೈನೆರದು ಹೆಣ್ಣಾದಾಗ ಗುರುಲಿಂಗದೇವರಿಂದ ದೀಕ್ಷೆ ಪಡೆದು ಚೆನ್ನಮಲ್ಲಿಕಾರ್ಜುನನ ಮೀಸಲು ಸತಿ ನಾನಾದೆ ಎಂಬ ಭಾವ ಅವಳಲ್ಲಿ ಬಲವಾಗ ತೊಡಗಿತು. ಮದುವೆಯ ವಯಸ್ಸಿಗೆ ಬಂದ ಮಗಳನ್ನು ಮನೆಯಲ್ಲಿಟ್ಟು ಕೊಂಡ ಮಹಾದೇವಿಯ ತಂದೆ-ತಾಯಿಗಳು ನೂರಾರು ಕಲ್ಲೇಟಿನಂತಹ ಮಾತುಗಳನ್ನು ಕೇಳ ಬೇಕಾಗಿತ್ತು. 'ಕತ್ತೆಯಂತೆ ಬೆಳೆದ ಮಗಳನ್ನು ಮದುವೆ ಮಾಡದೆ ಇರಿಸಿ ಕೊಂಡಿದ್ದಾರೆ. ಮದುವೆ ಮಾಡದಿದ್ದರೆ ಹಾಳಾಗಲಿ, ಮನೆಯಲ್ಲಾದರೂ ಗೌರವಯುಕ್ತವಾಗಿ ಇರಿಸಿಕೊಳ್ಳಬಾರದೆ ? ಓದು, ವಿದ್ಯೆ ಅಂತ ಗಂಡು ಹುಡುಗರ ಜೊತೆ ಮಠಕ್ಕೆ ಕಳಿಸುತ್ತಾರೆ'. ಇಂತಹ ಮಾತುಗಳಿಂದ ಶರಣ ಓಂಕಾರಪ್ಪ, ಲಿಂಗಮ್ಮ ಬಹುವಾಗಿ ನೊಂದರು-ಹೆಣ್ಣಿಗೆ ಬೇರಾವ ಬದುಕಿಗೂ ಅವಕಾಶವಿಲ್ಲವೆ ? ಗಂಡ, ಮದುವೆ, ಅಡಿಗೆ, ಉಡಿಗೆ-

ತೋರಿಸುತ್ತಾಳೆ. ಬೂದಿ ಮುಚ್ಚಿದ ಕೆಂಡದಂತೆ ಸುಪ್ತವಾಗಿದ್ದ ಅವಳ ಶಕ್ತಿಗೆ ಗುರುಲಿಂಗದೇವರು ತಮ್ಮ ಜ್ಞಾನವನ್ನೇ ಧಾರೆಯೆರೆದರು. ಎಲ್ಲಾ ವಚನಗಳ ಜ್ಞಾನವನ್ನೂ ಅರೆದು ಕುಡಿದ ಮಹಾದೇವಿ ಸ್ವತಃ ಕವಿಯಿತ್ರಿಯೂ ಆಗಿ ತನ್ನ ಅನುಭವ ಸಾರವನ್ನೇ ವಚನರೂಪದಲ್ಲಿ ಧಾರೆಯೆರೆದಳು. ಶರಣಸತಿಯಾಗಿ ಆಧ್ಯಾತ್ಮಲೋಕದಲ್ಲಿ ವಿಹರಿಸುವ ಹಂಸೆಯಾದಳು. ನಿರಾಕಾರ, ನಿರ್ಗುಣ ಚೆನ್ನಮಲ್ಲಿಕಾರ್ಜುನನನ್ನು ಕಾಣುವ ಉತ್ಕಟಬಯಕೆಯಿಂದ ಹುಚ್ಚಿಯಾಗಿದ್ದ ವಿರಹಿಣಿ ಮಹಾದೇವಿ ಅಂತೂ ತನ್ನ ಸಾಧನೆಯಿಂದ ದಿವ್ಯ ರೂಪಾನುಭವವನ್ನು ಪಡೆದಳು.

ಕಾಣುತ್ತಾ ಕಾಣುತ್ತಾ ಕಂಗಳ ಮುಚ್ಚಿದೆ ನೋಡವ್ವಾ
ಕೇಳುತ್ತ ಕೇಳುತ್ತ ಮೈಮರದೊರಗಿದೆ ನೋಡುವ್ವಾ
ಹಾಸಿದ ಹಾಸಿಗೆಯ ಹಂಗಿಲ್ಲದೆ ಹೋಯಿತ್ತು ಕೇಳವ್ವಾ
ಚೆನ್ನಮಲ್ಲಿಕಾರ್ಜುನ ದೇವರ ದೇವನ ಕೂಡುವ ಕೂಟವ
ನಾನೇನೆಂದರಿಯದೆ ಮರೆದೆ ಕಾಣವ್ವಾ.

ಲೌಕಿಕ ಜಗತ್ತಿನಲ್ಲಿದ್ದೇ ಆಧ್ಯಾತ್ಮಿಕ ದಿವ್ಯಾನುಭವ ಪಡೆದ ಮಹಾದೇವಿ ಕೌಶಿಕನ ಬಂಧನಕ್ಕೊಳಪಟ್ಟು, ಆ ಬಂಧನವನ್ನು ಕಡಿದುಕೊಂಡು ನಾನಾ ಎಡರು–ತೊಡರುಗಳನ್ನು ದಾಟಿ, ಮುಖ್ಯವಾಗಿ ಹೆಣ್ಣಾಗಿ ಅದೂ ದಿಗಂಬರ

---

ಹೆಣ್ಣು ಮುಟ್ಟಾದಾಗ ಮೂರು ದಿನ ಹೊರಗೆ ಕೂಡಿಸುವ ಪದ್ಧತಿ ಇಂದೂ ಹಳ್ಳಿಗಳಲ್ಲಿ ಜಾರಿಯಲ್ಲಿದೆ. ಹೆಂಗಸರು ಪೂಜೆ ಮಾಡಬಾರದು ಎಂಬುದನ್ನು ಅವರು ಮುಟ್ಟಾಗುತ್ತಾರೆ ಎಂಬ ವಾದದಿಂದ ಎತ್ತಿ ಹಿಡಿಯಲಾಗುತ್ತಿದೆ. ನೀವು ಮುಟ್ಟು ಎನ್ನುವುದನ್ನು ಹೊಲೆ ಎನ್ನುವುದಾದರೆ ಆಕೆಯ ಮುಟ್ಟು ನಿಂತೇ ಸೃಷ್ಟಿಗೆ ಕಾರಣಳಾಗುತ್ತಾಳೆ, ಮುಟ್ಟು ಎನ್ನುವುದು ಹೊಲೆ ಎನ್ನುವುದಾದರೆ ಗಂಡು-ಹೆಣ್ಣು ಜನ್ಮ ತಾಳುವುದು ಈ ಹೊಲೆಯಿಂದ ಎಂದಾಗ ನಾವು ಇಡೀ ಜಗತ್ತನ್ನೇ ಹೊಲೆ ಎನ್ನಬೇಕಾಗುತ್ತದೆ.

**ಮಾತೆ ಮಹಾದೇವಿ**

---

ತೊಡಿಗೆ ಈ ಕೆಸರಿನಲ್ಲಿಯೇ ಬಿದ್ದು ಸಾಯಬೇಕೆ ? ಅಬಲೆ, ಅಬಲೆ ಇದೊಂದು ದೊಡ್ಡ ಬಿರುದು ! ದೈಹಿಕ ಶಕ್ತಿಯಲ್ಲಿ ಹೆಣ್ಣು ಅಬಲೆ ಇರಬಹುದು, ಆದರೆ ಮಾನಸಿಕ ಶಕ್ತಿಯಲ್ಲಿ ಆಕೆ ಅಬಲೆಯೇನಲ್ಲ. ಹೆಣ್ಣಿನಲ್ಲಿರುವಷ್ಟು ಸಂಕಲ್ಪ, ದೃಢತೆ, ಛಲ, ಸಹನೆ ಗಂಡಿಗಿಲ್ಲ ಎಂದು ಮಹಾದೇವಿ ಹೆಣ್ಣಿಗಿರುವ ಇತಿ-ಮಿತಿಗಳನ್ನು ಖಂಡಿಸುತ್ತಾ, ಸ್ತ್ರೀಯಲ್ಲಿಯೂ ಸುಪ್ತಶಕ್ತಿಯಿದೆ, ಅದರ ಬಲದಿಂದ ಉನ್ನತ ಸಾಧನೆಯನ್ನು ಮಾಡಬಲ್ಲಳು, ಆತ್ಯಂತಿಕ ಸ್ಥಿತಿಯನ್ನು ಬಲ್ಲಳು ಎಂಬುದನ್ನು ಮಹಾದೇವಿ ಸಾಧಿಸಿ

ಳಾಗಿ ಕಲ್ಯಾಣವನ್ನು ತಲುಪಿ ತನ್ನ ಆಧ್ಯಾತ್ಮ ಜಗತ್ತಿನ ಹೊಸ ಅನುಭವ ಪಡೆದುಕೊಂಡು ಅಕ್ಕಮಹಾದೇವಿಯಾದಳು. ಅಲ್ಲಮ ಪ್ರಭು, ಬಸವಣ್ಣನಂತಹವರ ದಿವ್ಯ ವ್ಯಕ್ತಿತ್ವದ ಮಾರ್ಗದರ್ಶನದಲ್ಲಿ ಪೂಜೆ, ಧ್ಯಾನಗಳ ದಿವ್ಯಾನುಭವ ಪಡೆದು ಮಲ್ಲಿಕಾರ್ಜುನನ ವಿಶ್ವರೂಪ ದರ್ಶನ ಪಡೆದಳು. ಆಕೆಯ ಸಾಧನೆಯ ಅಂತಿಮ ಘಟ್ಟ ಕದಳೀಬನದಲ್ಲಿ ತನ್ನನ್ನೇ ತಾನು ಅರ್ಪಿಸಿಕೊಂಡಳು.

ತನು ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ?
ಮನ ನಿಮ್ಮ ರೂಪಾದ ಬಳಿಕ ನಾನಾರ ನೆನೆವೆ

ಪ್ರಾಣ ನಿಮ್ಮ ರೂಪಾದ ಬಳಿಕ ನಾನಾರನಾರಾಧಿಸುವೆ ಎನ್ನುತ್ತಾ ತನ್ನ ಸಾಧನೆಯ ಪರಮಾವಧಿಯನ್ನು ತಲುಪಿ ಚೆನ್ನಮಲ್ಲಿಕಾರ್ಜುನನಲ್ಲಿ ಒಂದಾದ ದಿವ್ಯಚೇತನ ಅಕ್ಕಮಹಾದೇವಿ.

ಸುಲಲಿತ, ಸರಳ ಭಾಷೆಯಿಂದ ಜನಮನಕ್ಕೆ ಹತ್ತಿರವಾದ ಕಾದಂಬರಿ ರೂಪದಲ್ಲಿ ತರಂಗಿಣಿ ಸರ್ವರೂ ಓದಬಹುದಾಗಿದೆ. ಅಕ್ಕಮಹಾದೇವಿಯ ಜೀವನಚರಿತ್ರೆಯನ್ನು ಸಮಗ್ರವಾಗಿ ಕಾದಂಬರಿ ರೂಪದಲ್ಲಿ ಸರಳೀಕರಿಸಿರುವುದೂ ಒಂದು ಸಾಧನೆಯೇ. ಉಡುತಡಿಯ ಅಕ್ಕಮಹಾದೇವಿ ನಮ್ಮ-ನಿಮ್ಮೆಲ್ಲರ ಮಧ್ಯೆ ಬೆಳೆದು ದೊಡ್ಡವಳಾಗಿ ಕಲ್ಯಾಣದಲ್ಲಿ ಅರಳಿ, ಕದಳಿಯಲ್ಲಿ ಐಕ್ಯಳಾದಂತೆ ಭಾಸವಾಗುತ್ತದೆ. ಏಕೆಂದರೆ ಅಕ್ಕಮಹಾದೇವಿ ಎದುರಿಸಿದ ಸಮಸ್ಯೆಗಳೂ, ಸಾಧನೆಗಳೂ ಓರ್ವ ಹೆಣ್ಣಾಗಿ ಸಾರ್ವಕಾಲಿಕ ವಾಸ್ತವತೆಯನ್ನು ಬಿಂಬಿಸುವುದಲ್ಲದೆ, ಸ್ತ್ರೀ ಸಂಕುಲಕ್ಕೆ ಭಿನ್ನದಾರಿ. ಹೆಣ್ಣು ಏನನ್ನಾದರೂ ಸಾಧಿಸ ಬಲ್ಲಳೆಂಬ ಆತ್ಮ ಸಂಕಲ್ಪವನ್ನು ಪ್ರತಿನಿಧಿಸುತ್ತಾಳೆ. ಅತ್ಯಂತ ಸೂಕ್ಷ್ಮವಾಗಿ ಹೆಣ್ಣಿನ ಭಾವನೆಗಳು, ಸಮಾಜದ ನಿಂದನೆಗಳನ್ನು ಬಿಚ್ಚಿಡುತ್ತಾ ಸಾಗುತ್ತದೆ ಕಾದಂಬರಿ. ತನ್ಮೂಲಕ ಮಾತೆ ಮಹಾದೇವಿ ಸ್ತ್ರೀ ಸಮುದಾಯದ ಶೋಷಣೆಯನ್ನು ಪ್ರತಿಭಟಿಸುವ ಪ್ರತಿನಿಧಿಯಾಗಿದ್ದಾರೆ. ಕಾದಂಬರಿಯಲ್ಲಿ ಓಂಕಾರಶೆಟ್ಟಿ-ಲಿಂಗಮ್ಮರ ಸರಳ-ಸರಸ ದಾಂಪತ್ಯದ ಶೃಂಗಾರರಸ ಮಾತೆ ಮಹಾದೇವಿಯರ ಶೈಲಿಯಲ್ಲಿ ಅತ್ಯಂತ ಸರಳವಾಗಿ ಹರಿದಿದೆ. ಆಧ್ಯಾತ್ಮ ಒಂದೇ ಅಲ್ಲದೆ ಬದುಕಿನ ಎಲ್ಲಾ ಮುಖಗಳನ್ನು ಓರ್ವ ಸಾಹಿತಿಯಾಗಿ ನೋಡಿರುವ ಅವರ ಪ್ರತಿಭೆ ಉಲ್ಲೇಖಾರ್ಹ-ಒಟ್ಟಿನಲ್ಲಿ ತರಂಗಿಣಿ ಒಂದು ಸುಂದರ, ಸರಳ ಕೃತಿ.

---

## ಮುಚ್ಚಿಡಬಯಸುತ್ತೇನೆ

ಮುಚ್ಚಿಡಬಯಸುತ್ತೇನೆ
ನೋವಿನ ಹಲವಾರು
ಗುಪ್ಪೆಗಳನ್ನು
ಆದನೇ ಹುಡಹುಡುಕಿ
ಕೆದಕೆದರಿ ಹರಡಿ
ಖುಷಿ ಪಡುತ್ತಾರವರು.

ಮುಚ್ಚಿಡಬಯಸುತ್ತೇನೆ
ನನ್ನ ಪ್ರೇಮಪತ್ರವನು
ರ್ಝೆರಾಕ್ಸ್ ಮಾಡಿಸಿ
ಬೀದಿ ಬೀದಿಗಳಲಿ ಹಂಚಿ
ಓದಿ ನಗುತ್ತಾರವರು.

ಮುಚ್ಚಿಡಬಯಸುತ್ತೇನೆ
ಬಯಕೆಯ ಗುಡ್ಡವನು
ಹೊತ್ತ ಎದೆಯನ್ನು
ಆದನೇ ಕಣ್ಣ ಬಾಣದಿಂದ
ತೂತು ಮಾಡಿ
ಇಣುಕಿ ನೋಡುತ್ತಾರವರು.

ಮುಚ್ಚಿಡಬಯಸುತ್ತೇನೆ ನನ್ನನ್ನು
ನನ್ನದೆಲ್ಲವನ್ನು.
ಬಗೆದು ನೋಡುವಲ್ಲಿಯೇ
ತೃಪ್ತಿ ಕಾಣುವ
ಜನರಲ್ಲಿ ಉಳಿದೀತೇ ?
ನಿನಗೆ ಕೊಡಲೆಂದು ಕೊನೆಗೆ ಏನಾದರೂ

**ಉಜ್ವಲಾ ಪುಣಜೇಗೌಡ, ಬೆಳಗಾವಿ**

# ಕಿರಣ್ ಬೇಡಿ

ಕಿರಣ್ ಬೇಡಿಯ ಹೆಸರೇ ಅನೇಕ ಮಹಿಳೆಯರಿಗೆ ಒಂದು ಸ್ಫೂರ್ತಿ. ಅಷ್ಟೇನೂ ಎತ್ತರವಿಲ್ಲದ ಈ ಮಹಿಳೆಯ ಧಾಡ್ಯತೆ ಎಲ್ಲರೊಳಗಿನ ಬೆಚ್ಚಗಿನ ಭಾವನೆಗಳನ್ನು ಹೊಡೆದಬ್ಬಿಸುವಂತಹುದು. ಕಾಲದ ಪರಿವೆಯಿರುವ ಈ ಶಿಸ್ತಿನ ಪೋಲೀಸ್ ಅಧಿಕಾರಿಣಿ ಪೋಲೀಸ್ ಖಾತೆಯ ಅತ್ಯಂತ ಉನ್ನತ ಹುದ್ದೆಯಾದ ಐ.ಜಿ.ಪಿ. ಆಗಿದ್ದಾರೆ. ಈಕೆಯ ಸರಳ ಸ್ವಭಾವದಿಂದಾಗಿ ಹಾಗೂ ಈಕೆಯಲ್ಲಿರುವ ಲಿಂಗ ಸಮಾನತೆಯ ದೃಷ್ಟಿಕೋನದಿಂದಾಗಿ ಈಕೆ ಬಹುಮಂದಿ ಮಹಿಳೆಯರಿಗೆ ಆತ್ಮೀಯ ಮಹಿಳೆಯಾಗಿ ಹಾಗೂ ಅಧಿಕಾರಿಣಿಯಾಗಿ ಗೋಚರಿಸುತ್ತಾಳೆ. ಮೇ 31ರಿಂದ ಜೂನ್ 3ರವರೆಗೆ ಇಂಡಿಯನ್ ಅಸೋಸಿಯೇಷನ್ ಫಾರ್ ವಿಮೆನ್ಸ್‌ಸ್ಟಡೀಸ್ ನವರು ಮೈಸೂರಿನಲ್ಲಿ ನಡೆಸಿದ ಆರನೆಯ ರಾಷ್ಟ್ರೀಯ ಸಮ್ಮೇಳನದಲ್ಲಿ ಈಕೆ ತಾವು ಸಂಶೋಧಿಸಿ ಬರೆದ ಲೇಖನವೊಂದನ್ನು ಮಂಡಿಸಿದರು. ತಮ್ಮ ಸಂಶೋಧನೆಯಿಂದ ಹಾಗೂ ಪೋಲೀಸ್ ಅಧಿಕಾರಿಣಿಯಾಗಿರುವ ತಮ್ಮ ಅನುಭವಗಳಿಂದ 'ಮಾದಕ ವ್ಯಸನ ಹಾಗೂ ಕೌಟುಂಬಿಕ ಹಿಂಸಾಚಾರ' ಇವೆರಡರ ನಡುವಿನ ಸಂಬಂಧಗಳ ಮೇಲೆ ಇವರು ಬೆಳಕು ಚೆಲ್ಲಿದರು. ಅವರು ಮಂಡಿಸಿದ ಲೇಖನದ ಸಂಕ್ಷಿಪ್ತ ವಿವರ, ಚರ್ಚೆಯಲ್ಲಿ ಆಕೆ ಮಂಡಿಸಿದ ವಿಚಾರಗಳೂ,ಇತರರು ಆಕೆಗೆ ಕೇಳಿದ ಪ್ರಶ್ನೆಗಳಿಗೆ-ಅವರು ನೀಡಿದ ಉತ್ತರ ಇವೆಲ್ಲವುಗಳನ್ನು ಇಲ್ಲಿ ಒಟ್ಟಾಗಿ ಬರೆಯುತ್ತಿದ್ದೇನೆ. ಮಹಿಳೆಯರ ಮೇಲೆ ನಡೆಯುತ್ತಿರುವ ರಾಚನಿಕ ಹಿಂಸಾಚಾರ ಜಾಸ್ತಿಯಾಗುತ್ತಿರುವ ಈ ಸಂದರ್ಭದಲ್ಲಿ ಕಾನೂನು,ಪೋಲೀಸ್ ಖಾತೆ, ಪೋಲೀಸರ ಕಾರ್ಯತತ್ಪರತೆಯಲ್ಲಿ ಮಹಿಳಾ ದೃಷ್ಟಿಕೋನದ ಅವಶ್ಯಕತೆಯಿದೆಯಲ್ಲದೇ, ಈ ದೃಷ್ಟಿಕೋನವನ್ನೊಳಗೊಂಡು ಹಲವಾರು ಬದಲಾವಣೆಗಳು ಆಗುವ ಜರೂರಿ ಇದೆ, ಕಿರಣ್ ಬೇಡಿಯವರ ವಿಚಾರಧಾರೆ ಇವೆಲ್ಲದರ ಮೇಲೆ ಬೆಳಕು ಚೆಲ್ಲಬಹುದೆಂದು ನಮ್ಮ ಆಶಯ.

ಮಾದಕ ವ್ಯಸನಿಗಳ ಅಪರಾಧಗಳು ಸಾಂಪ್ರದಾಯಿಕ ಅಪರಾಧಗಳಿಗಿಂತ ಭಿನ್ನವಾಗಿರುತ್ತವೆ. ಕೌಟುಂಬಿಕ ಹಿಂಸಾಚಾರದಲ್ಲಿ ಈ ಮಾದಕ ವ್ಯಸನತ್ವ ಬಹಳಷ್ಟು ಗಂಭೀರವಾದ ಪರಿಣಾಮವನ್ನು ಬೀರುತ್ತದೆ. ಈ ಹಂತದಲ್ಲಿ ಕಾನೂನಿನ ಕಾರ್ಯಾಚರಣೆಯ ರೀತಿ ಬಹಳ ಮುಖ್ಯವಾದುದು. ಹಾಗೂ ಇಡೀ ಸಮಸ್ಯೆಯ ಕೇಂದ್ರ ಬಿಂದುವೇ ಕಾನೂನಿನ ಕಾರ್ಯಾಚರಣೆಯಾಗಿ ಬಿಡುತ್ತದೆ.

ಕಿರಣ್ ಬೇಡಿ ತಮ್ಮ ಸಂಶೋಧನಾತ್ಮಕ ಲೇಖನದಲ್ಲಿ ಈ ಮಾದಕ ವ್ಯಸನತ್ವ ಹಾಗೂ ಕೌಟುಂಬಿಕ ಹಿಂಸಾಚಾರವನ್ನು ಭಾರತೀಯ ಸಂದರ್ಭದಲ್ಲಿ ಕುರಿತು ವಿವರಿಸಿದ್ದಾರೆ. ಕೌಟುಂಬಿಕ ಹಿಂಸಾಚಾರಕ್ಕೂ ಮಾದಕ ವ್ಯಸನಕ್ಕೂ ನೇರವಾದ ಸಂಬಂಧವಿದೆ. ಮಾದಕ ವ್ಯಸನತ್ವ ಬಹು ಮುಖ್ಯವಾಗಿ ಕೌಟುಂಬಿಕ ಹಿಂಸಾಚಾರಕ್ಕೆ ದಾರಿಮಾಡಿಕೊಡುತ್ತದೆ. ವಿವಾಹಿತ ಗಂಡಸರು ಹೆಚ್ಚಿನ ಪ್ರಮಾಣದಲ್ಲಿ ಈ ಕೌಟುಂಬಿಕ ಹಿಂಸಾಚಾರದಲ್ಲಿ ತೊಡಗಿರುತ್ತಾರೆ. ಅಂದರೆ ಅವರ ವೈವಾಹಿಕ ಜೀವನಕ್ಕೂ-ಕೌಟುಂಬಿಕ ಹಿಂಸಾಚಾರಕ್ಕೂ ಬಹು ಮುಖ್ಯವಾದ ಸಂಬಂಧವಿರುತ್ತದೆ. ಮಾದಕ ವ್ಯಸನತ್ವ ಹೆಚ್ಚಾದ ಹಾಗೆ ಕೌಟುಂಬಿಕ ಹಿಂಸಾಚಾರವೂ ಹೆಚ್ಚಾಗುತ್ತಾ ಹೋಗುತ್ತದೆ, ಚಿಕ್ಕ ವಯಸ್ಸಿನವರಲ್ಲಿ ಈ ಮಾದಕ ವ್ಯಸನತ್ವ ಅತಿಯಾಗಿರುವುದಲ್ಲದೇ ಕೌಟುಂಬಿಕ ಹಿಂಸಾಚಾರವೂ ಉನ್ನತ ಮಟ್ಟದಲ್ಲಿಯೂ ಇರುತ್ತದೆ. 26-30 ವರ್ಷ ವಯೋಮಿತಿಯವರಲ್ಲಿ ಮಾಧಕ ವ್ಯಸನತ್ವ ಹಾಗೂ ಹಿಂಸಾಚಾರ ಪ್ರವೃತ್ತಿಗಳು ಹೆಚ್ಚು ಕಂಡುಬರುತ್ತವೆ. ವಿದ್ಯಾಭ್ಯಾಸದ ಮಟ್ಟ ಕಡಿಮೆ ಇರುವಲ್ಲಿ ಮಾದಕ ವ್ಯಸನತ್ವ ಅತೀ ಹೆಚ್ಚಾಗಿ ಇರುವುದಲ್ಲದೇ, ಕೌಟುಂಬಿಕ ಹಿಂಸಾಚಾರವೂ ಜಾಸ್ತಿ ಮಟ್ಟದಲ್ಲಿ ಇರುತ್ತದೆ. ಪ್ರಾಥಮಿಕ ಶಾಲೆಯ ಹಂತದಲ್ಲಿಯೇ ನಿಲ್ಲಿಸಿಬಿಟ್ಟ ಗಂಡಸರಲ್ಲಿ ಈ ಸಮಸ್ಯೆ ಅಧಿಕವಾಗಿರುತ್ತದೆ. ಮಾದಕ ವ್ಯಸನಿಗಳು ಕೌಟುಂಬಿಕ ಹಿಂಸಾಚಾರ ಮಾಡುವುದು ಅಧಿಕವಾಗಿರುತ್ತದೆ. ಮಾದಕ ವಸ್ತುಗಳಿಗೆ ಬೇಕಾಗುವ ಹಣಕ್ಕಾಗಿ ಅಂದರೆ ಹಣದ ಬೇಡಿಕೆ ಮತ್ತು ಕೌಟುಂಬಿಕ ಹಿಂಸಾಚಾರದ ಮಧ್ಯೆ ಅತ್ಯಂತ ನಿಕಟ ಸಂಬಂಧವಿರುತ್ತದೆ.

ಈ ರೀತಿಯ ಮಾದಕ ವ್ಯಸನತ್ವಕ್ಕೆ ಮುಖ್ಯ ಕಾರಣಗಳೆಂದರೆ ಅಜ್ಞಾನ, ಕುತೂಹಲ, ಜೊತೆಗಾರರ ಪ್ರಭಾವ,

ಪ್ರಭಾವಯುತ ಮಾದಕ ವಸ್ತುಗಳ ಸೇವನೆ, ವೈವಾಹಿಕ ಜೀವನದ ಅಸಂತೋಷ, ವಿದ್ಯಾಭ್ಯಾಸದಲ್ಲಿ ಕಂಡು ಬರುವ ಒತ್ತಡಗಳು, ಕಲಸದಲ್ಲಿರುವ ಒತ್ತಡಗಳು, ಕುಟುಂಬದ ಪರಿಧಿಯಲ್ಲಿ ಇರಬಹುದಾದ ಮಾದಕ ವಸ್ತುಗಳ ಅಭ್ಯಾಸ; ಕೈಗೆ ಸುಲಭವಾಗಿ ಎಟುಕುವ ಮಾದಕ ವಸ್ತುಗಳು, ನಿರುದ್ಯೋಗ, ತಿರಸ್ಕರಿಸಲ್ಪಟ್ಟ ಭಾವನೆ, ಬೇಸರ, ದುಂದು ವೆಚ್ಚದ ಸ್ವಭಾವ, ಶ್ರೀಮಂತಿಕೆ.

---

ಅನೇಕ ಪತ್ರಿಕಾ ಪ್ರತಿನಿಧಿಗಳು ಹಾಗೂ ಇತರರು ಕೇಳಿದ ಪ್ರಶ್ನೆಗಳಿಗೆ ಕಿರಣ್ ಬೇಡಿ ನೀಡಿದ ಉತ್ತರಗಳು

1. ನೀವು ನಿಮ್ಮನ್ನು 'ಮಾದರಿ ಪಾತ್ರ'ವಾಗಿ ನೀಡುತ್ತಿದ್ದೀರಾ? ಅದನ್ನು ನಾನ್ಹೇಗೆ ಹೇಳಲಿ? ನಾನು 'ಮಾದರಿ'-ಪಾತ್ರವಾಗಿದ್ದೇನೆಯೋ ಇಲ್ಲವೋ ಎಂಬುದನ್ನು ನೀವು ಹೇಳಬೇಕು.

2. ನೀವು ಹೊರಗಡೆ ಹೋಗುವಾಗ ಪೋಲಿಸ್ ಆಗಿ ಅಥವಾ ಮಹಿಳೆಯಾಗಿ ಹೋಗುತ್ತೀರಾ?

ಕೆಲವು ಸಲ ಪೋಲಿಸ್ ಅಧಿಕಾರಿಣಿಯಾಗಿ ಅಥವಾ ಕೆಲವು ಸಲ ಜನ ನನ್ನನ್ನು ಮಹಿಳೆಯೆಂದೇ ಗುರುತಿಸುತ್ತಾರೆ.

3. ಬರವಣಿಗೆ, ಸಂಶೋಧನೆ ಇಂತಹವುಗಳಿಗೆ ಟೈಮ್ ಸಿಕ್ಕುತ್ತದೆಯೇ?

ಖಂಡಿತವಾಗಿ. ನಾನು ಮಾಡಿದ್ದೇನಲ್ಲ.

4. ನೀವು ಮಹಿಳಾ ಚಳುವಳಿ ನೀಡಿದ ಬಳುವಳಿ?

ನನ್ನನ್ನೇ.

---

ಪೋಲೀಸ್ ಖಾತೆ ಈ ಕೌಟುಂಬಿಕ ಹಿಂಸಾಚಾರದಲ್ಲಿ ಹೇಗೆ ವರ್ತಿಸಬಹುದು ? ಹಿಂಸಾಚಾರಕ್ಕೆ ಬಲಿಯಾಗುವ ಹೆಂಗಸರು ಇಂತಹ ಕೌಟುಂಬಿಕ ಹಿಂಸಾಚಾರದ ಪ್ರಕರಣಗಳನ್ನು ಪೋಲೀಸ್ ಠಾಣೆಗಳಲ್ಲಿ ದಾಖಲಿಸುವುದೇ ಇಲ್ಲ. ಈ ರೀತಿ ದಾಖಲಿಸಿದಾಗ ಕುಟುಂಬದಲ್ಲಿ ಪೋಲೀಸರ ಮಧ್ಯ ಪ್ರವೇಶಿಸುವಿಕೆ ಉಂಟಾಗುತ್ತದೆ ಎನ್ನುವ ಭಯ. ಹೀಗಾಗಿ ಕೌಟುಂಬಿಕ ಹಿಂಸಾಚಾರ ದಾಖಲಾಗುವುದೇ ಕಡಿಮೆ. ಪೋಲೀಸರ ನಿರ್ಲಕ್ಷದಿಂದಾಗಿಯೂ ನೊಂದ ಹೆಂಗಸರು ಈ ಬಗ್ಗೆ ದೂರು ಸಲ್ಲಿಸಲು ಠಾಣೆಗಳಿಗೆ ಬರುವುದೇ ಇಲ್ಲ. ತಂದೆ-ತಾಯಿಗಳೂ ಸಹ ಕುಟುಂಬದ ಮರ್ಯಾದೆಗಾಗಿ ಇಂತಹವುಗಳನ್ನು ಹೊರ ತರುವುದಿಲ್ಲ. ಪೋಲೀಸರು ತಲೆ ಹಾಕುವ ರೀತಿಯೂ ಇದಕ್ಕೆ ಕಾರಣ ವಿರಬಹುದು, ಪೋಲೀಸ್ ಅಧಿಕಾರಿಗಳೇ ಕೌಟುಂಬಿಕ ಹಿಂಸಾಚಾರದ ಮೇಲೆ ಅಧಿಕೃತವಾಗಿ ಬಂದಿರುವ ಕಾನೂನುಗಳ ಬಗ್ಗೆ ಅಜ್ಞಾನದಿಂದ ಇರುತ್ತಾರೆ. ಪೋಲೀಸ್ ಇಲಾಖೆ ಕೂಡಾ ಪೋಲೀಸರಿಗೆ ಈ ಕೌಟುಂಬಿಕ ಹಿಂಸಾಚಾರದ ನಿಯಂತ್ರಣದ ಕಾನೂನುಗಳ ಬಗ್ಗೆ ಯಾವುದೇ ತರಬೇತಿ ಅಥವಾ ಗೈಡೆನ್ಸ್ ನೀಡವುದಿಲ್ಲ.

ಕೊನೆಯದಾಗಿ ಕಿರಣ್‌ಬೇಡಿ ಸೆಕ್ಷನ್ 27ರಲ್ಲಿ 'ನಾರ್ಕೊಟಿಕ್ ಡ್ರಗ್ಸ್ ಆ್ಯಂಡ್ ಸೈಕೋಟ್ರೋಫಿಕ್ ಸಬ್‌ಸ್ಟ್ಯಾನ್ಸ್‌ಸ್ ಆ್ಯಕ್ಟ್ 1985' ನಲ್ಲಿ ಕಾನೂನು ಬದಲಾವಣೆಯಾಗಬೇಕೆಂದು ಸೂಚಿಸುತ್ತಾರೆ. ಈ ರೀತಿ ಬದಲಾಯಿಸುವುದರಿಂದ ಮಾದಕ ವ್ಯಸನತ್ವ ಹಾಗೂ ಕೌಟುಂಬಿಕ ಹಿಂಸಾಚಾರಕ್ಕೆ ಸಂಬಂಧಪಟ್ಟಂತೆ ಕಾನೂನಿನ ಕಾರ್ಯಾಚರಣೆ ಬಲಪಡಿಸಬಹುದು ಎನ್ನುತ್ತಾರೆ. ಜೊತೆಗೆ ಸಮುದಾಯದ ಪಾತ್ರವೂ ಬಹಳ ಮುಖ್ಯ ಎಂಬುದು ಇವರ ವಾದ. ಕಾನೂನಿನ ಬಿಗಿಯಾದ ಕಾರ್ಯಾಚರಣೆ ಹಾಗೂ ಸಮುದಾಯದ ಸಹಕಾರದಿಂದ ವ್ಯಸನತ್ವ ಹಾಗೂ ಅದಕ್ಕೆ ಸಂಬಂಧಿಸಿದ ಹಿಂಸಾಚಾರವನ್ನು ಸೂಕ್ತವಾದ ರೀತಿಯಲ್ಲಿ ಪರಿಹರಿಸಬಹುದೆಂಬುದು ಕಿರಣ್‌ಬೇಡಿಯವರ ಅಭಿಪ್ರಾಯ.

## ಚರ್ಚೆಯಲ್ಲಿ ಕಿರಣ್‌ಬೇಡಿ ಎತ್ತಿದ ಪ್ರಶ್ನೆಗಳು

ಕೌಟುಂಬಿಕ ಹಿಂಸಾಚಾರದಲ್ಲಿ ಪೋಲೀಸರ ಕಾರ್ಯಾಚರಣೆಯ ಬಗ್ಗೆ ಸಾಕಷ್ಟು ವಾದ-ವಿವಾದಗಳು ನಡೆದವು. ಕಿರಣ್ ಬೇಡಿಯಂತಹ ಪೋಲೀಸ್ ಅಧಿಕಾರಿಣಿಗಳು ಎಲ್ಲಾ ಕಡೆ ಇಲ್ಲದಿರುವುದರಿಂದ ಪೋಲೀಸರ ಮಧ್ಯ ಪ್ರವೇಶಿಕೆಯಿಂದ ಈ ರೀತಿಯ ಹಿಂಸಾಚಾರ ತಡೆಗಟ್ಟಲು ಸಾಧ್ಯವೇ ಎಂಬ ಅನುಮಾನಗಳೂ ಉದ್ಭವಿಸಿದವು. ಈ ಹಂತದಲ್ಲಿ ಕಿರಣ್ ಬೇಡಿ ಹೀಗೆ ಹೆಂಗಸರ ಮೇಲೆ ನಡೆಯುವ ಹಿಂಸಾಚಾರಗಳನ್ನು ಮಹಿಳಾ ಪೋಲೀಸ್ ಮಾತ್ರ ನಿರ್ವಹಿಸಲಿ ಎಂದು ಬೇಡಿಕೆಯನ್ನಿಡಬಹುದೇ ಎಂದಾಗ, ಪುರುಷ ಪ್ರಧಾನ ಮೌಲ್ಯಗಳನ್ನೇ ಮೈಗೂಡಿಸಿಕೊಂಡಿರುವ ಮಹಿಳಾ ಪೋಲೀಸ್‌ರಾದರೂ ಎಷ್ಟು ಸಮರ್ಥರಾಗಿ ಈ ಸಮಸ್ಯೆಗಳನ್ನು ಎತ್ತಿಕೊಳ್ಳಬಲ್ಲರು ಎಂಬ ವಾದ-ವಿವಾದಗಳು ನಡೆದಾಗ ಕಿರಣ್ ಬೇಡಿ ಮಹಿಳಾ ಚಳುವಳಿಗೆ ಹಾಗೂ ಮಹಿಳಾ ಅಧ್ಯಯನದ ವಕ್ತಾರರಿಗೆ ಕೇಳಿದ ಪ್ರಶ್ನೆಗಳು ಪೋಲೀಸ್ ಖಾತೆಯಲ್ಲಿನ ವ್ಯವಸ್ಥೆಗೆ ಸಂಬಂಧಪಟ್ಟವಾಗಿದ್ದವು.

1) ಕೌಟುಂಬಿಕ ಹಿಂಸಾಚಾರದಲ್ಲಿ ಪೋಲೀಸ್ ತನಿಖೆ ಬೇಕೇ ? ಬೇಡವೇ ? ಪೋಲೀಸರ ಮಧ್ಯ ಪ್ರವೇಶಿಸುವಿಕೆ ಅಗತ್ಯ ಎನ್ನುವುದಾದರೆ ಯಾವ ಕೇಡರ್‌ನ ಪೋಲೀಸರು ಮಧ್ಯ ಪ್ರವೇಶಿಸಬೇಕು ? ಒಂದು ಪಕ್ಷ ಸಬ್‌ಇನ್ಸ್‌ಪೆಕ್ಟರ್ ಕೇಡರ್‌ನವರು ಎಂದಾದರೆ–ಅವರು ಮಹಿಳಾ ಸಬ್‌ಇನ್ಸ್‌ಪೆಕ್ಟರ್ ಆದರೆ ಒಳ್ಳೆಯದೇ ? ಈ ಮಹಿಳಾ ಸಬ್‌ಇನ್ಸ್‌ಪೆಕ್ಟರಿಗೆ ಲಿಂಗ ಸಮಾನತೆಯ ಬಗ್ಗೆ ತರಬೇತಿಯ ಅವಶ್ಯಕತೆಯಿದೆಯೇ ? ಅಥವಾ ಹೆಂಗಸು/ಗಂಡಸು ಯಾವ ಪೋಲೀಸ್ ಅಧಿಕಾರಿಯೇ ಆಗಲಿ ಅವರಿಗೆ ಈ ಲಿಂಗ ಸಮಾನತೆಯ ಬಗ್ಗೆ ತರಭೇತು ನೀಡಿ ಪ್ರಜ್ಞಾವಂತರನ್ನಾಗಿಸುವ ಅವಶ್ಯಕತೆಯಿದೆಯೇ ? ಒಟ್ಟಾಗಿ ಈ ಬಗ್ಗೆ ಹಲವಾರು ಬದಲಾವಣೆ ಬೇಕೆಂದರೆ ಮಹಿಳಾ ಚಳುವಳಿ ಹಾಗೂ ಅಧ್ಯಯನ ಪಕ್ರಾರರು, ಈ ಬಗ್ಗೆ ಕಾಳಜಿ ಇರುವವರೆಲ್ಲ ನಿರ್ಧರಿಸಿ ಕೆಲವು ಸ್ಪಷ್ಟ ಬೇಡಿಕೆಗಳನ್ನೂ ಮುಂದಿಟ್ಟಾಗ ಬದಲಾವಣೆಗೆ ಯೋಚಿಸುವ ದಿಕ್ಕು ಸ್ಪಷ್ಟವಾಬಹುದು.

ಎರಡನೆಯದಾಗಿ ಕಿರಣ್‌ಬೇಡಿ ಸ್ಪಷ್ಟಪಡಿಸಿದ ವಿಚಾರ–ಕಾನೂನಿನ ಬಗ್ಗೆ. ಕಾನೂನು-ಕಾರ್ಯಾಚರಣೆ ಯಲ್ಲಿ ಫೇಲಾಗುತ್ತಿದೆ ನಿಜ. ಹಾಗೆಂದು ನಾವು ಕಾನೂನನ್ನೇ ಅಲಕ್ಷಿಸುವಂತಿಲ್ಲ. ಕಾನೂನು ಇದ್ದಾಗ ಮಾತ್ರ ನಾವು ಧ್ವನಿ ಎತ್ತಿ ಬದಲಾವಣೆ ಅಪೇಕ್ಷಿಸಲು, ಹೋರಾಡಲು ಸಾಧ್ಯವಾಗುತ್ತದೆ. ಹಾಗಾಗಿ ಕಾನೂನುಗಳ ಬದಲಾವಣೆಯು ಮುಖ್ಯ ಬೇಡಿಕೆಯೇ ಆಗಬೇಕಾಗುತ್ತದೆ ಎಂದರು.

---

## ಚುಡಾಯಿಸುವಿಕೆಯಿಂದ ಸುಟ್ಟು ಬೂದಿಯಾದ ಹನ್ನೆರಡರ ಬಾಲೆ

ಮಹಿಳೆಯ ಮೇಲೆ ನಡೆಯುವ ಹಿಂಸಾಚಾರಗಳು ಚಿಕ್ಕ ಹುಡುಗಿಯರನ್ನೂ ಬಿಡುವುದಿಲ್ಲ. ಬಾಂಬೆಯ ಥಾನೆಯ ರಸ್ತೆಯಲ್ಲಿ ಚುಡಾಯಿಸುವಿಕೆ ವಿರೋಧಿಸಿ ಅಣ್ಣಂದಿರ ಸಹಾಯ ಪಡೆಯಲು ಯತ್ನಿಸಿದ ಹನ್ನೆರಡರ ಎಳೆಯ ಬಾಲೆಯೊಬ್ಬಳು ಈ ಕಾರಣದಿಂದಲೇ ಸುಟ್ಟು ಬೂದಿಯಾದ ಘಟನೆ ಈ ವ್ಯವಸ್ಥೆಯ ಬಗ್ಗೆ ನಮ್ಮೆಲ್ಲರ ಎದೆ ಕಲ್ಲಾಗಿಸುವ ಘಟನೆಯಾಗಿದೆ. ಈ ಹುಡುಗಿ ಯನ್ನು ಆರು ಜನರ ಗುಂಪೊಂದು ಸುಟ್ಟು ಹಾಕಿತು. ಇಂತಹ ಘಟನೆಗೆ ಬಲಿಯಾಗುವವರೆಲ್ಲ, ಸುಲಭವಾಗಿ ಬಲಿಪಶುವಾಗುವವರೆಲ್ಲ ಆರ್ಥಿಕವಾಗಿ ದುರ್ಬಲ ವರ್ಗಕ್ಕೆ ಸೇರಿದ ಮಹಿಳೆಯರು ಎಂಬುದು ನಮ್ಮೆಲ್ಲರನ್ನು ಇನ್ನಷ್ಟು ಧೃತಿಗೆಡಿಸುವ ಸಂಗತಿ.

'ವಿರೋಲಿ'–ಕೊಳಚೆ ಪ್ರದೇಶದ ನಿವಾಸಿ ಈ ಹನ್ನೆರಡರ ಬಾಲೆ ಬಿಂದು ವಿಶ್ವಕರ್ಮ ತೆಂಗಿನಕಾಯಿ ವ್ಯಾಪಾರ ಮಾಡುವ ತನ್ನ ತಂದೆಗೆ ಊಟ ತೆಗೆದುಕೊಂಡು ಹೋಗುತ್ತಿದ್ದಾಗ ಬಸವರಾಜು ಹಾಗೂ ರಮೇಶ ಎನ್ನುವ ಇಬ್ಬರು ಹುಡುಗರು ಆಕೆಯನ್ನು ಚುಡಾಯಿಸಿದರು. ಮನೆಗೆ ಬಂದ ಬಿಂದು ಸೂರಜ್ ಹಾಗೂ ದೀಪಕ್ ಎನ್ನುವ ತನ್ನ ಹದಿನಾಲ್ಕು ಹಾಗೂ ಹದಿನೈದು ವರ್ಷದ ಅಣ್ಣಂದಿರಿಗೆ ಈ ಬಗ್ಗೆ ಹೇಳಿದಳು. ಅವರೀರ್ವರೂ ಬಸವರಾಜನ ಕುಟುಂಬದವರು ನಡೆಸುವ ಅಂಗಡಿಯ ಬಳಿ ತೆರಳಿ ಅವನ ಹಿರಿಯ ಅಣ್ಣನಿಗೆ ಈ ಬಗ್ಗೆ ತಿಳಿಸುದುದು ಮುಂದೆ ನಡೆದ ಈ ಬಾಲೆಯ ದಹನಕ್ಕೆ ಕಾರಣ.

ಸಾಯಂಕಾಲ ತರಕಾರಿಗೆಂದು ಹೋದ ದೀಪಕನನ್ನು ಒಂದು ಗುಂಪು ಮೇಲೆ ಬಿದ್ದು ಹೊಡೆದುದರಿಂದ, ಅನಾಹುತಕ್ಕೆ ಹೆದರಿ ದೀಪಕ್ ಹಾಗೂ ಸೂರಜ್ 'ವಿರೋಲಿ'ಯ ತಮ್ಮ ಕೊಳಚೆ ಪ್ರದೇಶದ ಮನೆಗೆ ಬರಲೇ ಇಲ್ಲ. ಹೆದರಿಕೆ ಅವರ ಮುಖ್ಯ ಕಾರಣವಾಗಿತ್ತು. ಬಿಂದು ಮನೆಯಲ್ಲಿ ಒಬ್ಬಳೇ ಆದಳು. ಅಣ್ಣಂದಿರಿಗೆ ಹಾಗೂ ತಂದೆಗಾಗಿ ಈಕೆ ರಾತ್ರಿಯೂಟಕ್ಕೆ ಚಪಾತಿ ಲಟ್ಟಿಸಿ ಬೇಯಿಸುತ್ತಿದ್ದಾಗ ಹುಡುಗರ ಗುಂಪೊಂದು ಒಳನುಗ್ಗಿ ಮೂಲೆಯಲ್ಲಿರುವ ಸೀಮೆಎಣ್ಣೆಯನ್ನು ಆಕೆಯ ಮೇಲೆ ಸುರಿದರು. ಪೋಲೀಸರ ಪ್ರಕಾರ ಈ ನಾಲ್ಕು ಹುಡುಗರು ಸೀಮೆ ಎಣ್ಣೆ ಸುರಿದು ಬೆಂಕಿ ಹಚ್ಚಿ ನಂತರ ಆ ಬಾಲೆಯನ್ನು ಬೆಂಕಿಯಲ್ಲಿ ಬೇಯಲು ಬಿಟ್ಟು ಬಾಗಿಲ ಚಿಲಕ ಹಾಕಿಕೊಂಡ ಓಡಿಹೋದರು. ಚಪಾತಿ ಹಿಟ್ಟು ಹಾಗೂ ಚಪಾತಿಗಳು ಸಾಂಕೇತಿವಾಗಿ ಅವಳ ಸಾವನ್ನು ಸಾಕ್ಷಿಸಿದ್ದವು ಅಷ್ಟೇ-

ಸಾಮಾಜಿಕ ಸುರಕ್ಷಾ ಪ್ರಭೋಧಿನಿ-ಈ ಸಾಮಾಜಿಕ ಸಂಸ್ಥೆ ಈ ವಿಚಾರದಲ್ಲಿ ಪ್ರಬಲವಾಗಿ ಪ್ರತಿಕ್ರಯಿಸಿ ಈ ಕೃತ್ಯವೆಸಗಿದ ಹುಡುಗರ ಕುಟುಂಬವನ್ನು ಸಾಮಾಜಿಕ ವಾಗಿ/ಕಾನೂನು ಬದ್ಧವಾಗಿ ಉಚ್ಚಾಟಿಸಬೇಕೆಂಬ ಬೇಡಿಕೆಯನ್ನಿತ್ತಿದ್ದಾರೆ.

# ಪೊಲೀಸ್ ಮತ್ತು ಮಹಿಳೆ

ಪೈಲಟ್, ಆಟೋ ಚಾಲನೆ, ಕಂಡಕ್ಟರ್ ಕೆಲಸ ಸೇರಿ ಐ.ಎ.ಎಸ್, ಐ.ಪಿ.ಎಸ್ ಅಧಿಕಾರಿ ಹುದ್ದೆ : ಉದ್ಯಮ, ಎಂಜನಿಯರಿಂಗ್, ಇವೇ ಮುಂತಾದ ಉದ್ಯೋಗ ಕ್ಷೇತ್ರಗಳನ್ನು ಮಹಿಳೆ ಇಂದು ಪ್ರವೇಶಿಸಿದ್ದಾಳೆ, ಹಿಂದೊಮ್ಮೆ ಈ ಉದ್ಯೋಗಗಳು ಪುರುಷರಿಗೆ ಮಾತ್ರ ಮೀಸಲೆಂದು ಭಾವಿಸಲಾಗಿದ್ದವು.

ಪೊಲೀಸ್ ಹುದ್ದೆ ಕೂಡ ಇದೇ ನಮೂನೆಗೆ ಸೇರಿದ್ದು. ಇತ್ತೀಚಿನವರೆಗೂ ಪೋಲಿಸ್ ಎಂದೊಡನೆಯೇ ದಪ್ಪ ಮೀಸೆಯ ಕೆಂಗಣ್ಣಿನ ಖಾಕಿ ಸಮವಸ್ತ್ರಧಾರಿಯ ಚಿತ್ರ ಎಲ್ಲರಲ್ಲೂ ಮೂಡುತ್ತಿತ್ತು. ಎಷ್ಟೋ ವೇಳೆ ಪೊಲೀಸ್ ಎಂಬ ಪದವೇ ಇಂದಿಗೂ ಹಲವಾರು ಸಂದರ್ಭಗಳಲ್ಲಿ ಬೆಚ್ಚಿ ಬೀಳಿಸುವಂತದ್ದಾಗಿರುತ್ತದೆ. ಅಲ್ಲದೆ ಬೈಯ್ಗುಳು, ಒರಟುತನಗಳು ಕೇವಲ ಪೊಲೀಸರ ಸ್ವತ್ತು ಎಂಬಂತೆ ಪರಿಗಣಿಸಲಾಗುತ್ತದೆ.

ಆದರೆ ಇಂತಹ 'ವಿಶೇಷ ಬಿರುದು'ಗಳನ್ನು ಪಡೆದ ಕ್ಷೇತ್ರದಲ್ಲೂ ಮಹಿಳೆ ಇಂದು ಪ್ರವೇಶಿಸಿ ತನ್ನ ಪಾಲನೆಯ ಸಹಜ ಗುಣವನ್ನು ಮೆರೆದಿದ್ದಾಳೆ. ಹುದ್ದೆಗೆ ಅಂಟಿರುವ ಕಳಂಕವನ್ನು ತೊಡೆಯಲು ಯತ್ನಿಸಿದ್ದಾಳೆ.

ಕಾನೂನು ಮತ್ತು ಶಿಸ್ತು ಪಾಲನೆ ಪೊಲೀಸರ ಮುಖ್ಯ ಕರ್ತವ್ಯ, ಈ ಹುದ್ದೆ ಸೇವಾ ಮನೋಭಾವವನ್ನು ಕೂಡ ಬಯಸುತ್ತದೆ. ಜೊತೆಗೆ ಪೊಲೀಸ್ ಕೆಲಸ ಸುಲಭವೇನಲ್ಲ. ಬಹಳ ಸೂಕ್ಷ್ಮ ಮತ್ತು ಜಟಿಲ ಸನ್ನಿವೇಶಗಳಲ್ಲಿ ಅವರು ಕೆಲಸ ಮಾಡಬೇಕಾಗುತ್ತದೆ.

ಪೊಲೀಸ್ ಹುದ್ದೆಗೆ ಸೇರಬಯಸುವ ಮಹಿಳೆ ಎಸ್.ಎಸ್.ಎಲ್.ಸಿ ಶಿಕ್ಷಣ ಪಡೆದಿರಬೇಕು. ಮೂರು ತಿಂಗಳ ತರಬೇತಿ ಕೋರ್ಸ್ ಮುಗಿಸಿದ ನಂತರ ಆಸಕ್ತಿ ಇದ್ದಲ್ಲಿ ಕೆಲಸಕ್ಕೆ ಸೇರಬಹುದಾಗಿರುತ್ತದೆ.

ಪುರುಷ ಮತ್ತು ಮಹಿಳಾ ಪೊಲೀಸರ ಕಾರ್ಯ ನಿರ್ವಹಣೆಯಲ್ಲಿ ಹೆಚ್ಚಿನ ವ್ಯತ್ಯಾಸವೇನೂ ಇರುವುದಿಲ್ಲ. ಸಾಮಾನ್ಯವಾಗಿ ಪ್ರತಿ ಠಾಣೆಗಳಲ್ಲಿ ಮಹಿಳಾ ಪೊಲೀಸರು ದೂರವಾಣಿ ಮತ್ತು ವೈರ್‌ಲೆಸ್ ಮೂಲಕ ಬಂದ ಮಾಹಿತಿಗಳನ್ನು ಸ್ವೀಕರಿಸಿ ಮುಂದಿನ ಕ್ರಮ ಕೈಗೊಳ್ಳಲು ಹಿರಿಯ ಪೊಲೀಸ್ ಅಧಿಕಾರಿಗಳಿಗೆ ನೆರವಾಗುತ್ತಾರೆ. ಮಹಿಳಾ ಅಪರಾಧಿಗಳ ಸಂಪೂರ್ಣ ಜವಾಬ್ದಾರಿ ಇವರದ್ದಾಗಿರುತ್ತದೆ. ಕಳ್ಳತನದ ಅಪರಾಧಗಳಲ್ಲಿ ಮಹಿಳಾ ಅಪರಾಧಿಗಳ ಕೂಲಂಕುಶ ತನಿಖೆಯಿಂದ ಹಿಡಿದು ಅವರನ್ನು ಕೋರ್ಟಿಗೆ ಹಾಜರು ಪಡಿಸಿ, ಪ್ರಕರಣ ಇತ್ಯರ್ಥಗೊಳ್ಳುವವರೆಗಿನ ಹೊಣೆಗಾರಿಕೆ ಕೂಡ ಇವರದ್ದೇ ಆಗಿರುತ್ತದೆ.

ಅಪರಾಧಿಗಳು ತಪ್ಪಿಸಿಕೊಳ್ಳದಂತೆ ಅವರನ್ನು ಎಚ್ಚರಿಕೆಯಿಂದ ಕಾಯಬೇಕಾಗುತ್ತದೆ. ಕೆಲವೊಮ್ಮೆ ವಿಶೇಷ ಕರ್ತವ್ಯಗಳನ್ನು ಕೂಡ ನಿರ್ವಹಿಸಬೇಕಾಗುತ್ತದೆ. ಸಭೆ ಸಮಾರಂಭಗಳಲ್ಲಿ, ಮೆರವಣಿಗೆಗಳಲ್ಲಿ ಶಾಂತಿ ಕದಡದಂತೆ ಅಥವಾ ಅಹಿತಕರ ಘಟನೆ ನಡೆಯದಂತೆ ನಿಗಾ ವಹಿಸಬೇಕಾಗುತ್ತದೆ. ಅಲ್ಲದೆ ವಿಶಿಷ್ಟ ಸಂದರ್ಭಗಳಲ್ಲಿ ಗಣ್ಯರ ರಕ್ಷಣೆ ನೆರವಿಗೆ ನಿಲ್ಲಬೇಕಾಗುತ್ತದೆ. ಒಟ್ಟಾರೆ ಸಮಾಜದ ಸಹಜ ಪರಿಸ್ಥಿತಿಯಲ್ಲಿ ಏರು-ಪೇರಾಗದಂತೆ ನೋಡಿಕೊಳ್ಳುವ ಸಾಮಾಜಿಕ ಜವಾಬ್ದಾರಿ ಪೊಲೀಸರದ್ದಾಗಿರುತ್ತದೆ.

ಹುದ್ದೆಗೆ ವೇಳೆಯ ಮಿತಿಯೂ ಇರುವುದಿಲ್ಲ. ಎಷ್ಟೋ ಬಾರಿ ಮಹಿಳಾ ಅಪರಾಧಿಗಳನ್ನು ರಾತ್ರಿ ಇಡೀ ಕಾಯ್ದುಕೊಳ್ಳಬೇಕಾಗುತ್ತದೆ. ಅಲ್ಲದೆ ತುರ್ತು ಸಂದರ್ಭಗಳಲ್ಲಿ ದಿನದ 24ತಾಸು ಸೇವೆಗೆ ಕಟಿಬದ್ಧವಾಗಿರಬೇಕಾಗತ್ತದೆ.

ಹೀಗಿದ್ದಾಗ್ಯೂ ಹಿಂದೆ 'ಸುಕೋಮಲೆ' ಎನಿಸಿಕೊಂಡಿದ್ದ ಮಹಿಳೆ ಇಂದು ವೃತ್ತಿಪರಳಾಗಲು ಬಯಸುತ್ತಿದ್ದಾಳೆ. ಹಿರಿಯರು ತನಗೆ ಅಬಲೆ, ಅಸಹಾಯಕಿ, ಪರಾವಲಂಬಿ ಮುಂತಾಗಿ ಕಟ್ಟಿದ್ದ ಪಟ್ಟವನ್ನೆಲ್ಲಾ ಕಿತ್ತೊಗೆದು ಪುರುಷರ ಭದ್ರಕೋಟೆಯೆಂದು ನಂಬಲಾಗಿದ್ದ ಪೊಲೀಸ್ ಹುದ್ದೆಯಲ್ಲಿ ಸಮರ್ಥವಾಗಿ ಕಾರ್ಯ ನಿರ್ವಹಿಸಲು ಯತ್ನಿಸಿದ್ದಾಳೆ.

**ಮಹಿಳಾ ದೂರು ವಿಭಾಗ :**

ಮಹಿಳೆಯರ ಸಮಸ್ಯೆ ಎಷ್ಟೋ ಬಾರಿ ಮಹಿಳೆಯರಿಗೆ ಮಾತ್ರ ಅರ್ಥವಾಗುವಂತದ್ದು. ಮತ್ತು ಒಬ್ಬ ಮಹಿಳೆ

ಅಪರಿಚಿತ ಎನಿಸಿಬಿಡಬಹುದಾದ ಪುರುಷ ಪೊಲೀಸರಿಗಿಂತ ಆಪ್ತಳು ಎನಿಸುವ ಮಹಿಳಾ ಪೊಲೀಸರೊಂದಿಗೆ ಮನ ಬಿಚ್ಚಿ ಮಾತನಾಡಬಲ್ಲಳು. ಈ ಕಾರಣ ಮಹಿಳೆಯರ ದೂರು ಮತ್ತು ಅವರ ದುಗುಡ–ದುಮ್ಮಾನಗಳನ್ನು ಆಲಿಸಿ ಸೂಕ್ತ ಪರಿಹಾರ ನೀಡುವ ಸಲುವಾಗಿ 1989ರ ಆಗಸ್ಟ್ 7ರಂದು ಬೆಂಗಳೂರು ನಗರದಲ್ಲಿ ಮಹಿಳಾ ದೂರು ವಿಭಾಗವನ್ನು ಪೊಲೀಸ್ ಇಲಾಖೆ ತೆರೆದಿದೆ.

ಈ ವಿಭಾಗದ ಸೂತ್ರಧಾರಿಗಳೆಲ್ಲ ಮಹಿಳೆಯರೇ. ಮಹಿಳೆಯರ ಮೇಲಿನ ದೌರ್ಜನ್ಯ, ಮಹಿಳೆಯರಿಗಾಗುವ ವಂಚನೆ, ಹೀಗೆ ಮಹಿಳೆಯರನ್ನು ಒಳಗೊಂಡ ಪ್ರಕರಣಗಳ ಬಗ್ಗೆ ಈ ವಿಭಾಗದಲ್ಲಿ ದೂರನ್ನು ಆಲಿಸಲಾಗುತ್ತದೆ. ಈ ವಿಭಾಗದಲ್ಲಿ ಕಾನೂನು ಕ್ರಮ ಜರುಗಿಸಲು ಅವಕಾಶ ಇಲ್ಲದಿದ್ದರೂ ಇಲ್ಲಿರುವ ಮಹಿಳಾ ಪೊಲೀಸರು ಮತ್ತು ಸಬ್–ಇನ್ಸ್‌ಪೆಕ್ಟರುಗಳು ಸಮಸ್ಯೆಗಳಿಗೆ ರಾಜೀ ಸೂತ್ರದ ಮೂಲಕ ಪರಿಹಾರ ಒದಗಿಸುತ್ತಾರೆ.

ವರದಕ್ಷಿಣೆ, ಕಿರುಕುಳ, ಮನೆ ಮಾಲೀಕನ ಕಿರಿಕಿರಿ, ಗಂಡನ ಹಿಂಸೆ ಹೀಗೆ ಮಹಿಳೆಯರು ಎದುರಿಸುವ ಈ ಬಗೆಯ ತೊಡಕನ್ನು ಇಲ್ಲಿ ನಿವಾರಿಸಲು ಯತ್ನಿಸಲಾಗುತ್ತದೆ. ಒಪ್ಪಂದ ಏರ್ಪಡದ ಪ್ರಕರಣಗಳನ್ನು ಸಂಬಂಧಪಟ್ಟ ಠಾಣೆಗಳಿಗೆ ವರ್ಗಾಯಿಸಲಾಗುತ್ತದೆ.

ಈ ವಿಭಾಗದಲ್ಲಿ ಕೆಲಸ ಮಾಡುತ್ತಿರುವ ಪೊಲೀಸರಲ್ಲಿ ಅಂಜನಾ ಕೂಡಾ ಒಬ್ಬರು. ಸಾರ್ವಜನಿಕರ ಸಂಪರ್ಕವನ್ನು ಒದಗಿಸಿಕೊಡುವ ಈ ಹುದ್ದೆ ಬಗ್ಗೆ ಈಕೆಗೆ ಮೊದಲಿನಿಂದಲೂ ಒಲವು. "ಪ್ರಾಮಾಣಿಕವಾಗಿ ಕೆಲಸ ಮಾಡಲು ಇಲ್ಲಿ ಹೆಚ್ಚು ಅವಕಾಶವಿದೆ. ಕಳೆದುಹೋದ ಮಗನನ್ನು ಮತ್ತೆ ಅವರ ಪೋಷಕರಿಗೆ ಒಪ್ಪಿಸಿದಾಗ ಒಂಥರಾ ಸಾರ್ಥಕ ಭಾವ ಮೂಡುತ್ತದೆ ಎನ್ನುತ್ತಾರೆ" ಇವರು.

ಈ ವಿಭಾಗದ ಮಹಿಳಾ ಸಬ್-ಇನ್ಸ್‌ಪೆಕ್ಟರ್ ಗಂಗಮ್ಮ ಹಲವಾರು ವರ್ಷಗಳಿಂದ ಪೊಲೀಸ್ ಉದ್ಯೋಗ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. "ಮಹಿಳೆಯರಿಗೆ ಅನ್ಯಾಯವಾಗಬಾರದು ಎಂಬುದು ನಮ್ಮ ಮುಖ್ಯ ಉದ್ದೇಶ. ನಮ್ಮನ್ನು ನಂಬಿ ಬರುವ ಜನರಿಗೆ ಸಹಾಯ ಮಾಡುವುದರಲ್ಲಿ ತೃಪ್ತಿ ಸಿಗುತ್ತದೆ. ನಾವು ತೊಂದರೆ ಪಟ್ಟರೂ ಇನ್ನೊಬ್ಬರಿಗೆ ಒಳ್ಳೆಯದಾಗಬೇಕು" ಎಂದು ಇವರು ಹೇಳುತ್ತಾರೆ.

"ನೂರು ಮಂದಿ ಪುರುಷರು ಇರುವೆಡೆ ನಾವು ಮಹಿಳೆಯರು ಇಬ್ಬರು ಇರುತ್ತೇವೆ. ಈ ಸಂದರ್ಭದಲ್ಲಿ ನಮಗೆ ಕರ್ತವ್ಯ ಮುಖ್ಯವಾಗಿರುತ್ತದೆ ಹೊರತು ಗಂಡು–ಹೆಣ್ಣು ಎಂಬ ಭಾವನೆಯಲ್ಲ" ಎಂದು ಮತ್ತೊಬ್ಬ ಮಹಿಳಾ ಪೊಲೀಸ್ ಹೇಳುತ್ತಾರೆ.

ಮಹಿಳಾ ದೂರು ವಿಭಾಗದಂತೆಯೇ ಬೆಂಗಳೂರು ನಗರದಲ್ಲಿ 'ವರದಕ್ಷಿಣೆ ನಿಷೇಧ ದಳ' ಕೂಡ ಇದೆ. ಇಲ್ಲಿ ಕಾರ್ಯ ನಿರ್ವಹಿಸುವವರೆಲ್ಲರೂ ಮಹಿಳೆಯರೇ 'ವರದಕ್ಷಿಣೆ ಪ್ರಕರಣಗಳ' ಬಗ್ಗೆ ಪ್ರತ್ಯೇಕವಾಗಿ ಇಲ್ಲಿ ತನಿಖೆ ನಡೆಸಲಾಗುತ್ತದೆ.

ಎಷ್ಟೋ ಬಾರಿ ಮಹಿಳೆಯರು ತಮ್ಮ ಸಮಸ್ಯೆಗಳನ್ನು ಪುರುಷರಿಗೆ ಹೇಳಲು ಹಿಂಜರಿಯುತ್ತಾರೆ. ಈ ಕಾರಣ ಮಹಿಳೆ ನ್ಯಾಯದಿಂದ ವಂಚಿತಳಾಗಿಬಿಡುವ ಸಾಧ್ಯತೆಯೂ ಇದೆ. ಇದೇ ಕಾರಣಕ್ಕಾಗಿ ಮಹಿಳೆಯರನ್ನು ಒಳಗೊಂಡ ಪ್ರಕರಣಗಳಲ್ಲಿ ಅವರ ವಾದವನ್ನು ಆಲಿಸಲು ಪ್ರತ್ಯೇಕವಾಗಿ ಮಹಿಳಾ ಸಿಬ್ಬಂದಿಗಳೇ ಇರುವ 'ಮಹಿಳಾ ಪೊಲೀಸ್ ಠಾಣೆ' ರೂಪುಗೊಳ್ಳಬೇಕಿದೆ ಎಂಬುದು ಮಹಿಳೆಯರ ಬೇಡಿಕೆಯಾಗಿದೆ. ಈ ಬಗ್ಗೆ ಸರ್ಕಾರ ಕೂಡ ಪರಿಶೀಲನೆ ನಡೆಸುತ್ತಿದೆ. ಆದರೆ ಇನ್ನೂ ಇವನ್ನು ಕಾರ್ಯರೂಪಕ್ಕಿಳಿಸುವ ನಿರ್ಧಾರ ಕೈಗೊಂಡಿಲ್ಲ.

ಹಲವು ಸಂದರ್ಭಗಳಲ್ಲಿ ಪೊಲೀಸರ ಅತಿರೇಕ, ಹಿಂಸಾಚಾರ,ಕ್ರೌರ್ಯ ಮತ್ತು ಕೆಲವೊಮ್ಮೆ ಕಾನೂನಿನ ಚೌಕಟ್ಟನ್ನು ಮೀರುವ ಅವರ ವರ್ತನೆಗಳು–ಇದರಿಂದಾಗಿ ಉದ್ದೇಶಿತ ಗುರಿ ಸಾಧಿಸುವಲ್ಲಿ ಇವರು ದಾರಿ ತಪ್ಪುತ್ತಿರುವರೇನೋ ಎನಿಸದಿರದು.

ಇದಲ್ಲದೆ ಕೈದಿಗಳೊಂದಿಗಿನ ವಿಶೇಷವಾಗಿ ಮಹಿಳಾ ಕೈದಿಗಳೊಂದಿಗೆ ಪುರುಷ ಪೊಲೀಸ್ ವರ್ತನೆ, ಅತ್ಯಾಚಾರ ಆರೋಪಗಳು–ಇವುಗಳನ್ನೆಲ್ಲಾ ಗಮನಿಸಿದಾಗ ಸಲಹುವ ಗುಣವನ್ನು ಪಡೆದ ಮಹಿಳೆ, ಈ ಹುದ್ದೆಗೆ ಅಗತ್ಯವಾಗಿ ಬೇಕೆನಿಸುತ್ತದೆ. ಈ ಕಾರಣ ಈ ಹುದ್ದೆಗೆ ಇನ್ನೂ ಹೆಚ್ಚು ಹೆಚ್ಚು ಮಹಿಳೆಯರು ಬರಬೇಕಿದೆ.

ಆರ್ಥಿಕ ಸಬಲತೆಗಾಗಿ ಮಾತ್ರ ಬಹುತೇಕ ಮಹಿಳೆಯರು ದುಡಿಯುವ ಕ್ಷೇತ್ರಕ್ಕೆ ಕಾಲಿಡುವುದರಿಂದ ಹುದ್ದೆಯ ಕರ್ತವ್ಯದಲ್ಲಿ ಸಂಪೂರ್ಣ ಸಾರ್ಥಕತೆ ಸಾಧಿಸಲು ಸಾಧ್ಯವಾಗುವುದಿಲ್ಲ. ಪೊಲೀಸ್ ಹುದ್ದೆಯೂ ಇದಕ್ಕೆ ಹೊರತಾಗಿಲ್ಲ.

ಕೇಂದ್ರ ಪೊಲೀಸ್ ವಿಶಾಸಲು ಪಡೆಯಲ್ಲಿ ಮಹಿಳೆಯರು : ಕೇಂದ್ರ ಪೊಲೀಸ್ ವಿಶಾಸಲು ಪಡೆ

---

ಮಹಿಳೆಯರಿಗೆ ಸಂಬಂಧಿಸಿದ ಪ್ರಕರಣಗಳ ಬಗ್ಗೆ ಕೂಲಂಕುಶ ತನಿಖೆ ನಡೆಸುವ ಸಲುವಾಗಿ ಪೊಲೀಸ್ ಠಾಣೆಗಳಲ್ಲಿ 1960ರಲ್ಲಿ ಪ್ರತ್ಯೇಕವಾಗಿ ಮಹಿಳಾ ಪೊಲೀಸರನ್ನು ನೇಮಕ ಮಾಡಿಕೊಳ್ಳಲು ಆರಂಭಿಸಲಾಯಿತು.

ಈಗ ರಾಜ್ಯದ ಪ್ರತಿ ಜಿಲ್ಲೆಯ ಮುಖ್ಯ ಪೊಲೀಸ್ ಠಾಣೆಗಳಲ್ಲಿ ಸಾಮಾನ್ಯವಾಗಿ ಇಬ್ಬರು ಮಹಿಳಾ ಪೊಲೀಸರು ಕಾರ್ಯ ನಿರ್ವಹಿಸುತ್ತಿದ್ದಾರೆ. ಹೆಡ್ ಕಾನ್‌ಸ್ಟೇಬಲ್ ಸೇರಿದಂತೆ ರಾಜ್ಯದಲ್ಲಿ ಈಗ 493 ಮಹಿಳಾ ಪೊಲೀಸರು ಇದ್ದಾರೆ.

---

(ಸಿಆರ್‌ಪಿಎಫ್)ಯಲ್ಲಿ ಮಹಿಳೆಯರ ಘಟಕವನ್ನು 1986 ರಲ್ಲಿ ಆಗಿನ ಪ್ರಧಾನಿ ರಾಜೀವ್ ಗಾಂಧಿ ಅವರು ಜಾರಿಗೆ ತಂದರು. ಪರಿಣಾಮ ಇಂದು ಈ ಪಡೆಯಲ್ಲಿ 765ಕ್ಕೂ ಹೆಚ್ಚು ಮಹಿಳೆಯರು ಕಾರ್ಯ ನಿರ್ವಹಿಸುತ್ತಿದ್ದಾರೆ.

1987ರಲ್ಲಿ ಮಹಿಳಾ ಪೊಲೀಸರ ಮೊದಲ ತಂಡ ವಿಶಾರತ್ ಗಲಭೆಯನ್ನು ನಿಯಂತ್ರಿಸುವಲ್ಲಿ ತೊಡಗಿ ಸಫಲತೆ ಪಡೆಯಿತು. ಈ ಸಂದರ್ಭದಲ್ಲಿ ಪೊಲೀಸ್ ವಿಶಾಸಲು ಪಡೆಯ 3 ಕಂಪನಿಗಳು ಭಾಗವಹಿಸಿದ್ದವು.

ನಂತರದಲ್ಲಿ ದೆಹಲಿ,ಜಮ್ಮು, ಕಾಶ್ಮೀರ ಮೇಘಾಲಯ ವಿಜಯವಾಡ ಇಲ್ಲಿ ಕೂಡ ಮಹಿಳಾ ಪೊಲೀಸರು ತಮ್ಮ ಸಾಮರ್ಥ್ಯವನ್ನು ಮೆರೆದು ಮಹಿಳೆಯರಿಂದ ಈ ಕೆಲಸ ಸಾಧ್ಯವೋ ಇಲ್ಲವೋ ಎಂಬ ಆರಂಭದ ಅನುಮಾನಗಳನ್ನು ಬಗೆಹರಿಸಿದ್ದರು. ಶ್ರೀನಗರದಲ್ಲಿ ಕೂಡಾ ಮಹಿಳಾ ಪೊಲೀಸರನ್ನು ನೇಮಕ ಮಾಡಲಾಗಿತ್ತು. ಮಹಿಳಾ ಉಗ್ರಗಾಮಿಗಳನ್ನು ಹಿಡಿಯುವಲ್ಲಿ ಇವರು ಬಹಳ ನೆರವು ನೀಡಿದ್ದರು.

ಈ ದಿಸೆಯಲ್ಲಿ ಅವಳಿಗೆ ಇನ್ನೂ ಅರಿವು ಮತ್ತು ತಕ್ಕ ತರಬೇತಿ ನೀಡಬೇಕಾಗಿದೆ.

ಲತಾ

---

## ಇಲ್ಲಾ ಎನ್ನಲು ಎಷ್ಟು ಧೈರ್ಯ ನಿನಗೆ !

ಕೊಲಂಬಿಯಾದ ಬೊಗಾಟಾದಲ್ಲಿ ಕುಡಿದ ಮತ್ತಿನಲ್ಲಿದ್ದ ಪೋಲೀಸ್ ಅಧಿಕಾರಿಯೊಬ್ಬ ಪಾರ್ಟಿಯೊಂದರಲ್ಲಿ 13 ವರ್ಷದ ಹುಡುಗಿಗೆ ತನ್ನ ಜೊತೆ ಡ್ಯಾನ್ಸ್ ಮಾಡಲು ಕೇಳಿದ. ಅದಕ್ಕೆ ಆ ಹುಡುಗಿ "ನಿನ್ನ ಜೊತೆ ಡ್ಯಾನ್ಸ್ ಮಾಡುವುದಕ್ಕಿಂತ ನಾನು ಸಾಯುವುದನ್ನು ಬಯಸುತ್ತೇನೆ" ಎಂದು ಹೇಳಿ ಡ್ಯಾನ್ಸ್ ಮಾಡಲು ನಿರಾಕರಿಸಿದಳು. ಆ ಪೋಲೀಸ್ ಅಧಿಕಾರಿ ತಕ್ಷಣವೇ ಅವಳನ್ನು ಶೂಟ್ ಮಾಡಿದನು ಸಮವಸ್ತ್ರದಲ್ಲಿದ್ದ ಆಧಿಕಾರಿ ಆಕೆಯ ದೇಹವನ್ನು ರಸ್ತೆಗೆ ಎಳೆದುಕೊಂಡು ಹೋಗಿ ಅಲ್ಲಿ ನೆರೆದಿದ್ದ ದಿಗ್ಭ್ರಮೆಗೊಂಡಿದ್ದ ಅತಿಥಿಗಳಿಗೆ "ಎಲ್ಲರೂ ಇಲ್ಲಿಂದ ಹೋಗಿ, ಇಲ್ಲಿ ಏನೂ ಆಗಿಲ್ಲ" ಎಂದ

# ಪೋಲೀಸ್ ಠಾಣೆಯಲ್ಲಿ ಆತ್ಮಹತ್ಯೆಗೆ ಪ್ರಯತ್ನಿಸಿದ–ನಂಜಮ್ಮ

ಮಥುರ, ರಮೀಜಾಬಿ ಮಹಿಳಾ ಚಳುವಳಿಯಲ್ಲಿ ಇನ್ನು ಹಸಿ ಹಸಿಯಾಗಿ ನೆನಪಿರುವ ಹೆಸರುಗಳು. ಪೋಲಿಸ್ ಠಾಣೆಯಲ್ಲಿ ಹೆಂಗಸಿನ ಮೇಲೆ ಆಗುವ ಅತ್ಯಾಚಾರ ಅವಮಾನ ಇಂತಹವುಗನ್ನು ಮಹಿಳಾ ಚಳುವಳಿ ಸುಮಾರು ಹದಿನೈದು ವರ್ಷಗಳಿಂದ ಪ್ರಶ್ನಿಸಿ ಹೋರಾಟ ನಡೆಸುತ್ತಿದೆ. ವರದಕ್ಷಿಣೆ, ಅತ್ಯಾಚಾರ ಇಂತಹವುಗಳ ಕಾನೂನುಗಳ ಚೌಕಟ್ಟಿನಲ್ಲಿ ಹಲವಾರು ಬದಲಾವಣೆಗಳಾಗಿರುವುದು ನಿಜವಾದರೂ, ಪೋಲಿಸ್ ಠಾಣೆಯಲ್ಲಿ ಹೆಂಗಸರ ಮೇಲೆ ನಡೆಯುವ ದೌರ್ಜನ್ಯಗಳು ಇನ್ನೂ ಕೊನೆಗೊಂಡಿಲ್ಲ. ಪ್ರತಿನಿತ್ಯವೂ ಒಂದೊಂದು ಘಟನೆ ಈ ಪಟ್ಟಿಯಲ್ಲಿ ಸೇರಿಕೊಳ್ಳುತ್ತವೆ. ಆರ್ಥಿಕವಾಗಿ ದುರ್ಬಲವಾಗಿರುವ ಹೆಂಗಸರು ಇದಕ್ಕೆ ಹೆಚ್ಚು ಹೆಚ್ಚು ಬಲಿಪಶುಗಳಾಗುತ್ತಿದ್ದಾರೆ. ಮೈಸೂರಿನ ವಿವೇಕಾನಂದ ನಗರದ ನಂಜಮ್ಮನ ಕತೆಯೂ ಇದಕ್ಕೆ ಒಂದು ಉದಾಃಹರಣೆಯಷ್ಟೇ. 4-5-93 ರಂದು ನಂಜಮ್ಮನನ್ನು ಕಳ್ಳತನದ ಆರೋಪದ ಮೇಲೆ ಮೈಸೂರಿನ ದೇವರಾಜ್ ಪೋಲಿಸ್ ಸ್ಟೇಷನ್ನಿಗೆ ಕರೆದುಕೊಂಡುಹೋಗಿ ಆಕೆಯನ್ನು ಮಾನಸಿಕವಾಗಿ, ದೈಹಿಕವಾಗಿ ಹಿಂಸಿಸಿ ಭಯ ಪಡಿಸಿದುದರ ವಿರುದ್ಧ ಮೈಸೂರಿನ ಸಮತಾ ವೇದಿಕೆ ಹೋರಾಟ ನಡೆಸುತ್ತಿದೆ. ನ್ಯಾಯಕ್ಕಾಗಿ ಇವರು ಪೋಲಿಸ್ ಕಮಿಷನ್ನರ ಮೊರೆ ಹೊಕ್ಕಿದ್ದಾರೆ. ಅವಮಾನ ಸಹಿಸಲಾರದೇ ಪೋಲಿಸ್ ಠಾಣೆಯ ಮಹಡಿಯಿಂದ ಹಾರಿ ಆತ್ಮಹತ್ಯೆಗೆ ಪ್ರಯತ್ನಿಸಿ, ದೈಹಿಕವಾಗಿ ಗಾಯಗೊಂಡಿರುವ ನಂಜಮ್ಮ ಈಗ ಮೈಸೂರಿನ ಕೆ. ಆರ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ. ನಂಜಮ್ಮನ ಚಿಕಿತ್ಸೆಗೆ ಉಚಿತ ಸವಲತ್ತುಗಳನ್ನು ಒದಗಿಸಲು ಹೋರಾಡುವುದರ ಜೊತೆಗೆ ನಂಜಮ್ಮನಿಗೆ ಧೈರ್ಯ, ಭರವಸೆಗಳನ್ನು ಮಾನಸಿಕವಾಗಿ ತುಂಬಲು ಸಮತಾ ವೇದಿಕೆ ಪ್ರಯತ್ನಿಸುತ್ತಿದೆ. ನ್ಯಾಯಕ್ಕಾಗಿ ಹಲವಾರು ಬೇಡಿಕೆಗಳನ್ನು ಪೋಲಿಸ್ ಕಮೀಷನರ್ ಮುಂದೆ ಇಟ್ಟು ಇವರು ಅಪರಾಧಿಗಳಿಗೆ ಶಿಕ್ಷೆಯಾಗುವುದೇ ಎಂದು ಕಾಯ್ದು ನೋಡುತ್ತಿದ್ದಾರೆ. 'ಮಾನಸ ಪತ್ರಿಕೆ'ಗೆ ಈ ಬಗ್ಗೆ ಎಲ್ಲಾ ವಿವರಗಳನ್ನಿತ್ತು ಸಹಕರಿಸಿದವರು ಸಮತಾ ವೇದಿಕೆಯ ರತಿ ರಾವ್. ಪೋಲಿಸ್ ಮುಖದ ಪರಿಚಯಕ್ಕಾಗಿ ಹಾಗೂ ಹೆಣ್ಣಿನ ಅಸಹಾಯಕತೆಯ ಮೇಲೆ ಬೆಳಕು ಚೆಲ್ಲಲು ಇಲ್ಲಿ ನಂಜಮ್ಮನ ಹೇಳಿಕೆಯನ್ನು ಹಾಗೂ 'ಸಮತಾ' ವೇದಿಕೆಯವರು ಪೋಲಿಸ್ ಕಮಿಷನ್ನರಿಗೆ ಇತ್ತ ಬೇಡಿಕೆಗಳನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ.

### ನಂಜಮ್ಮನಿತ್ತ ಹೇಳಿಕೆ

ನಾನು ಸೇಟ್ ವಿಜಯಕುಮಾರ್ (ಶಾಂತಿ ನಿವಾಸ ಹೋಟೆಲ್owner) ವಿವೇಕಾನಂದ ಸರ್ಕಲ್, 4ನೇ ಕ್ರಾಸಿನಲ್ಲಿ ಕೆಲಸ ಮಾಡುತ್ತಿದ್ದೆ. ನಾಲ್ಕು ತಿಂಗಳ ಹಿಂದೆ ಕೆಲಸಕ್ಕೆ ಸೇರಿದ್ದೆ. ದಿನಾಂಕ 4-5-1663 ಮಂಗಳವಾರ ದಂದು 8ಘಂಟೆಗೆ ಕೆಲಸಕ್ಕೆ ಹೋಗಿ, ಅಲ್ಲಿ ಬನ್ ಮತ್ತು ಟೀ ಕುಡಿದು ಅವರ ತಮ್ಮನ ಮನೆ (ಗೋಪಾಲ ಸ್ವಾಮಿ) ರಾಮಕೃಷ್ಣನಗರಕ್ಕೆ ಬಂದೆ ಬಟ್ಟೆ, ಪಾತ್ರೆ ತೊಳೆದು ಕಸ ಗುಡಿಸುವ ಸಮಯದಲ್ಲಿ ಪೋಲಿಸ್ ಬಂದರು. ಮನೆಯವರೆಲ್ಲಾ ಎಂದರೆ ಗೋಪಾಲರ ಅತ್ತಿಗೆ ಎಲ್ಲಾ ಪೋಲಿಸರನ್ನು ಕೇಳಿದರು 'ಯಾಕೆ ಅವಳನ್ನ ಕರೆದುಕೊಂಡು ಹೋಗುತ್ತಿರಿ' ಎಂದು ಕೇಳಿದರು. ಒಬ್ಬರೇ ಪೋಲಿಸ್ ಸೈಕಲ್ ಮೇಲೆ ಬಂದಿದ್ದ. ನಾನು ಅವರನ್ನು ತುಂಬಾ ಕೇಳಿದೆ 'ಯಾರು ಫಿರ್ಯಾದು ಕೊಟ್ಟರು' ಎಂದು ಕೇಳಿದೆ. ನನಗೆ ಗೊತ್ತಿಲ್ಲ ನಿನ್ನ ಕರೆದು ಕೊಂಡು ಬರಲು ಇನ್ಸ್‌ಪೆಕ್ಟರ್ ಹೇಳಿದ್ದಾರೆ' ಎಂದರು. ಅತ್ತಿಗೆಯವರು ನೀನು ಹೋಗು ನಿನಗೇನು ಭಯವಿಲ್ಲ, ಗೋಪಾಲಣ್ಣ ಫೋನ್ ಮಾಡುತ್ತಾರೆ' ಎಂದರು. ದಾರಿಯಲ್ಲಿ ನಡೆದುಕೊಂಡು ಹೋಗುವಾಗ ನಾನು ಪೋಲಿಸ್‌ಗೆ 'ನನ್ನ ಯಜಮಾನರನ್ನು ಕರೆದುಕೊಂಡು ಬರುವೆ' ಎಂದೆ. ಆದರೆ ಅವನು ನನ್ನ ಆಟೋನಲ್ಲಿ ಕೂರಿಸಿ ಸರಸ್ವತಿ ಪುರಂ ಪೋಲಿಸ್ ಸ್ಟೇಷನ್‌ಗೆ ಕರೆದುಕೊಂಡು ಬಂದ. ಇನ್ಸ್‌ಪೆಕ್ಟರ್ ನನ್ನ ಕೇಳಿದರು. 'ವಿಜಯ ಕುಮಾರ್ ಮನೆಯಿಂದ ಏನನ್ನು ಎತ್ತಿದೆ', ಆಗ ನಾನು 'ಏನು ವಿಷಯ ಹೇಳಿದರೆ ನಾನು ಹೇಳುವೆ' ಎಂದೆ. ಪುನಃ ಆಟೋನಲ್ಲಿ ದೇವರಾಜ್ ಪೋಲಿಸ್ ಸ್ಟೇಷನ್‌ಗೆ ಕರೆದುಕೊಂಡು ಬಂದರು. 'ಕುಳಿತುಕೊ' ಎಂದು ಮಹಡಿಯ ಮೇಲೆ ಕೂರಿಸಿದರು. ಮಹಿಳಾ ಪೋಲಿಸ್ ಕರೆದುಕೊಂಡು ಹೋಗಿಲ್ಲ, ಗಂಡಸರೇ

ನನ್ನ ಪ್ರಶ್ನಿಸುತ್ತಿದ್ದರು. (11-30-12:00) ಅಲ್ಲಿಂದ ಸಂಜೆ ಆರು ಘಂಟೆಯ ತನಕ ಅಲ್ಲೇ ಕೂರಿಸಿದರು. ನಾನು ಮೂರು ಸಲ 'ಏಳು ವರುಷದಿಂದ ಕೆಲಸ ಮಾಡುತ್ತಿದ್ದ ನಾಗೇಶ್‌ರವರಿಗೆ ಕರೆಸಿ' ಎಂದೆ, 'ಆಗಲ್ಲ' ಎಂದರು. ಏಳು ಘಂಟೆಗೆ ಸಬ್ ಇನ್ಸ್‌ಪೆಕ್ಟರ್ (ವಿಚಾರಣೆ ಮಾಡುವವರು) ನನ್ನ ಹೆಸರು ಕೇಳಿದರು 'ಎಲ್ಲಿ ಹೋದರೂ ನಿಂದು ಇದೇ ಕೆಲಸಾನಾ ಅಂದ್ರು, 'ವಿಜಯಕುಮಾರ್ ಮನೇನಲ್ಲಿ ಅವರ ಹೆಂಡತಿ ಡೆಲ್ಲಿಗ ಹೋಗುವಾಗ ಪ್ಯಾಕಿಂಗ್ ಮಾಡುವಾಗ ನೀನೂ ಪ್ಯಾಂಕಿಂಗ್ ಮಾಡಿದೆಯೊ?' ಎಂದರು. ನಾನು ಇಲ್ಲಾಂದೆ. 'ಸುಳ್ಳು ಹೇಳಬ್ಯಾಡ' ಎಂದರು. 'ಬೇಕಾದರೆ ಅವರ ಹೆಂಡತಿಗೆ ಫೋನ್ ಮಾಡಿ, ನಾನು ಆ ಕೆಲಸ ಮಾಡಿಲ್ಲ' ಎಂದೆ. 'ನಾನು ಏನು ತೆಗೆದು ಕೊಂಡೆ' ಎಂದು ಪುನಃ ಕೇಳಿದೆ. ಆಗೆ ಅವರು; "ಅರವತ್ತು ಸಾವಿರ ರೂಪಾಯಿ, ದುಡ್ಡು, ಒಡವೆಗಳನ್ನೆಲ್ಲ ಎತ್ತಿ ಕೊಂಡಿದ್ದೀಯ" ಎಂದರು. ನಾನು ಹೇಳಿದೆ, 'ನಾನು ಇಂತಹ ಕೆಲಸ ಮಾಡೋಳಲ್ಲ, 14 ವರುಷ ದಿಂದ ಕೆಲಸ ಮಾಡ್ತಾ ಇದೀನಿ. ಎಲ್ಲರನ್ನು ಕರೆಸಿ ಕೇಳಿ, ಶ್ರೀನಾಗೇಶ್‌ರವರನ್ನು ಕರೆಸಿ ಕೇಳಿ ಸಾರ್' ಎಂದೆ. ಅವರನ್ನು ಏನು ಕೇಳೋದು, ನೀನು ಹೇಳಿ, ಕೇಳಿ ಕಳ್ಳತನ ಮಾಡುತ್ತೀಯ', ಎಂದರು. 'ಬಡಸ್ತನ ಇರುತ್ತೆ, ಹೇಳು ಎಲ್ಲಿ ಇಟ್ಟಿದೀಯೊ', ಎಂದು. 'ನಾನು ತೆಗೆದು ಕೊಂಡಿಲ್ಲ' ಎಂದ ಹೇಳಿದೆ. ಆಗ ಇಕ್ಕಳ ತೆಗೊಂಡು ಬೆರಳುಗುರನ್ನು ಅಮುಕಿ ಚಿತ್ರ ಹಿಂಸೆ ಮಾಡಿದರು. ಆಗ ಪೇಪರ್‌ನವರ ಬಂದರು. ನನ್ನ ಪ್ರಾಣ ಉಳಿಯಿತು. ಇಕ್ಕಳ ತಗೊಂಡು ಅಮುಕಿದ ವ್ಯಕ್ತಿ 'ಹೇಳಿ ಬಿಡಮ್ಮ ಎಲ್ಲಿ ಇಟ್ಟಿದ್ದೆ. ಇಲ್ಲದಿದ್ದರೆ ಉಗುರೆಲ್ಲ ಕಿತ್ತು ಬಿಡುತ್ತೇವೆ' ಎಂದರು. ಇನ್ನೊಬ್ಬ ಪೋಲೀಸ್ ಹೇಳಿದರು 'ನಾಲ್ಕು ಐದು ಜನ ಬಿಡಿಸಿ, ಒಂದು ರೂಮ್‌ನ್ನಾಗೆ ಬಿಟ್ಟರೆ ಸೀರೆ ಬಿಚ್ಚಿದರೆ ಎಲ್ಲಾ ಬಾಯಿ ಬಿಡುವೆ, ಬಲು ಚಿನಾಲಿ, ಯಾವ ಲೇಡಿ ಪೋಲಿಸ್ ನನ್ನ ಹತ್ತಿರ ಬರಲಿಲ್ಲ. ರಾತ್ರಿ ಎಂಟು ಗಂಟೆಯ ಸಮಯ ಇರಬಹುದು.

ನಾನು ವಂದಾ ಮಾಡಬೇಕು ಎಂದು ಹೋಗುವಾಗ ಒಂದು ಹೆಂಗಸು ಪೋಲೀಸ್ ಕಳುಹಿಸಿ ಕೊಟ್ಟರು. ಲೇಡಿ ಪೋಲಿಸು, 'ನೀನು ಏನೇನು ಇಟ್ಟಿದೀಯೊ' ಎಂದು ಕೇಳಿದರು. ನಾನು ಹದಿನಾಲ್ಕು ರೂಪಾಯಿ ಇದೆ ನೋಡಿ' ಎಂದೆ. 'ನಿನ್ನ ಸೀರೆ ಬಿಚ್ಚು' ಎಂದು ಹುಡುಕಾಡಿದರು ಏನು ಸಿಗಲಿಲ್ಲ. 'ಸೀರೆ ಉಟ್ಟು ಬಂದು ಬಿಡು, ಆ ದುಡ್ಡು ರಾತ್ರಿ ಊಟಕ್ಕೆ ಆಗುತ್ತೆ' ಎಂದು ಲೇಡಿ ಪೋಲಿಸ್ ಹೇಳಿದರು.. ಅದೇ ಪೋಲೀಸ್ (ಸೀರೆ ಬಿಚ್ಚಿ ರೂಂಗೆ....) ಹೇಳಿದ ವ್ಯಕ್ತಿ 'ನಿನಗೆ ಎಷ್ಟು ಮಕ್ಕಳು' ಎಂದೆಲ್ಲಾ ಮನೆ ವಿಚಾರ ಕೇಳಿದರು. ನಾನೆಲ್ಲಾ ಹೇಳಿದೆ. ಬೋಸಡಿ, ಚಿನಾಲಿ ಎಂದೆಲ್ಲಾ ಬಯ್ದು ಒಳಗೆ ಹೋದರು. ನನ್ನ ಮುಂದೆಲ್ಲಾ ಬೇರೆ ಹೆಂಗಸರಿಗೆ ಕೋಲಿನಿಂದ ಹೊಡೆಯುತ್ತಿದ್ದರು.

---

1) ಮನೆಗೆಲಸದ ಸಂಜಮ್ಮ ಆಕೆ ನಿರಪರಾಧಿ ಎಂದು ಸಾಧಿಸಲು ಬೇಡಿಕೊಂಡರೂ ಆಕೆಯ ಗಂಡನನ್ನಾಗಲೀ ಅಥವಾ ಹಳೆಯ ಕೆಲಸದ ಯಜಮಾನರನ್ನಾಗಲೀ ಸಂಪರ್ಕಿಸಲು ಪೋಲಿಸರು ಬಿಡಲಿಲ್ಲ. ಆಕೆಯ ನಿರಪರಾಧಿತ್ವ ಸಾಧಿಸಲು ಆಕೆಗೆ ಅವಕಾಶ ನೀಡಲೇ ಇಲ್ಲ. ಹೀಗಾಗಿ ಪೋಲೀಸ್ ಠಾಣೆಯಲ್ಲಿ ಆಕೆ ಹಿಂಸೆಗೊಳಗಾಗಬೇಕಾಯಿತು.

ಆಕೆಯ ಬಗ್ಗೆ ಕೊಟ್ಟಿರುವ ಫಿರ್ಯಾದಿನ ಬಗ್ಗೆ ಆಕೆಗೆ ತಿಳಿಸದುದರಿಂದ ಆಕೆಯನ್ನು ಬೆಳಗ್ಗೆ ಹತ್ತು ಘಂಟೆಯಿಂದ ಹಿಂಸೆಗೆ ಒಳಪಡಿಸಲಾಯಿತು. ಆಕೆಯನ್ನು ಕೊಲೆಗಾರರ ರೀತಿ ಒಂದು ಪೋಲೀಸ್ ಠಾಣೆಯಿಂದ ಇನ್ನೊಂದು ಪೋಲೀಸ್ ಠಾಣೆಗೆ ಸಾಗಿಸಲಾಯಿತು. ಆಕೆಯನ್ನು ತೀವ್ರವಾಗಿ ಪ್ರಶ್ನಿಸುವ ಜೊತೆಗೆ ದೈಹಿಕವಾಗಿ ಹಿಂಸಿಸಿ ಕೊನೆಗೆ ಠಾಣೆಯಲ್ಲಿಯೇ ಸಾಮೂಹಿಕ ಅತ್ಯಾಚಾರದ ಭಯ ಹುಟ್ಟಿಸಲಾಯಿತು.

3) ಆಕೆಯನ್ನು ಕರೆದುಕೊಂಡು ಹೋಗುವಾಗ ಹೆಂಗಸು ಪೋಲೀಸ್ ಇರಲಿಲ್ಲ. ಆಕೆಯನ್ನು ಪ್ರಶ್ನಿಸುವಾಗಲಾಗಲೀ ಹಿಂಸಿಸುವಾಗಲಾಗಲೀ, ಹೆಂಗಸು ಪೋಲೀಸ್ ಉಪಸ್ಥಿತರಿರಲಿಲ್ಲ.

ಯಾರು ಈ ಸಾಮೂಹಿಕ ಅತ್ಯಾಚಾರದ ಭಯದಿಂದ ಆಕೆ ಆತ್ಮಹತ್ಯೆಗೆ ಪ್ರಯತ್ನಿಸುವಂತೆ ಮಾಡಿದರೋ ಅವರನ್ನು, ಕೆಲಸದಿಂದ ಅಮಾನತ್ತುಗೊಳಿಸಬೇಕು. ಹಾಗೂ ಕಾನೂನಿನ ಚೌಕಟ್ಟಿನೊಳಗೇ ಆಕೆಯನ್ನು ಅಸಹಾಯಕನ್ನಾಗಿರಿಸಿದ್ದ ರಿಂದ ಆಕೆಗೆ ಸೂಕ್ತ ಪರಿಹಾರ ನೀಡಬೇಕು.

ಪೋಲೀಸ್ ಠಾಣೆಯ ಒಳಗೆ ಹೆಂಗಸರ ಘನತೆಗೆ ಕುಂದು ಬರದಂತೆ ವಿಚಾರಣೆ ನಡೆಸಬೇಕು. ಹೆಂಗಸರು ಕಳ್ಳರಿರಲಿ, ಅಪರಾಧಿಗಳಿರಲಿ, ಸೂಳೆಯರಿರಲಿ, ಘನತೆ ಅವರು ಬಯಸುವ ಹಕ್ಕು.

'ಸಮತಾ', ಮೈಸೂರು

---

ಅದೆಲ್ಲಾ ನೋಡಿ ನನಗೆ ತುಂಬಾ ಭಯವಾಯಿತು ಇನ್ನೆಲ್ಲಿ ರೂಂಗ ಸೇರಿಸಿ ಅತ್ಯಾಚಾರ ಮಾಡುತ್ತಾರೋ ಎಂದು ಹೆದರಿ ಇವರ ಹಿಂಸೆ ತಡೆಯಲಾರದೇ, ನಾನು ಆತ್ಮಹತ್ಯೆ ಮಾಡಿಕೊಳ್ಳಲು ಕಕ್ಕಸು ಪಕ್ಕದಿಂದ, ಎರಡು ಹಂತದ ಮಹಡಿಯಿಂದ ಕೆಳಕ್ಕೆ ಹಾರಿದೆ. ಕೆಳಗೆ ಬಿದ್ದಾಗ ಅಕ್ಕ ಪಕ್ಕ ದವರು ಬಂದರು. ನಾನು ಕೂಗುತ್ತಿದ್ದೆ. ಪೋಲೀಸ್ ಹಿಂಸೆ ತಡೆಯಲಾರೆ' ಎಂದು ಕೂಗಿ ಹೇಳಿದೆ. ನೀರು ಕೊಡಿ. ಎಂದೆ. ಯಾರೋ ನೀರು ಕುಡಿಸಿದರು. ಜ್ಞಾನ ತಪ್ಪಿತು.

ಜ್ಞಾನ ಬಂದ ಮೇಲೆ ನಾನು ಇಲ್ಲೇ ಆಸ್ಪತ್ರೆಯಲ್ಲಿ ಇದ್ದೆ. ಪೋಲೀಸರು ಏನೆಲ್ಲಾ ಕೇಳಿದರು. ನಾನು ಏನು ಹೇಳಿದೆ ಎಂದು ನನಗೆ ನೆನಪಿಲ್ಲ. ಆದರೆ ನನ್ನ ಎಡಗೈ ಹೆಬ್ಬೆಟ್ಟನ್ನು ಒತ್ತಿಕೊಂಡರು. ನನಗೆ ರುಜು ಮಾಡಲು ಬರುತ್ತದೆ.

ಸೇಟ್ ವಿಜಯಕುಮಾರ್‌ರವರು ಮೂರನೇ ದಿನ (5-5-93) ಬುಧವಾರ ಬಂದು ಒಡವೆ, ಹಣ, ಎಲ್ಲಾ ಮನೆಯಲ್ಲಿ ಇದೆ ನಾನು ಕಂಪ್ಲೇಟ್ ವಾಪಸ್ಸು ಪಡೆಯುವೆ ಎಂದರು.

**ಹೀಗೆ ಪೋಲೀಸರಿಂದ ಬಂಧಿತರಾಗುವ ಮಹಿಳೆಯರು ಹೇಗೆ ವರ್ತಿಸಬಹುದು ?**

ನಂಜಮ್ಮನ ಅನುಭವದಿಂದ ಪೋಲೀಸ್ ಅಸಹಾಯಕ ಹೆಣ್ಣುಗಳನ್ನು ಹೇಗೆ ಬೇಕಾದರು ವಿಚಾರಣೆ ನಡೆಸಬಹುದು ಯಾವ ಸಮಯದಲ್ಲಿ ಬೇಕಾದರು ವಿಚಾರಣೆ ನಡೆಸ ಬಹುದು ಎಂದು ಭಾವಿಸದಂತಿದೆ. ಬೆಳಿಗ್ಗೆ ಹತ್ತು ಘಂಟೆ ಯಿಂದ ರಾತ್ರಿಯವರೆಗೆ ನಿರಪರಾಧಿಗಳನ್ನು ಠಾಣೆ ಯಲ್ಲಿಟ್ಟುಕೊಂಡು ಹಿಂಸಿಸುವುದು ಮಾನಸಿಕ ಆಘಾತಕ್ಕೆ ಒಳಗಾಗುವ ಪ್ರಕ್ರಿಯೆ ಉಂಟು ಮಾಡುವುದಲ್ಲದೇ ನಂಜಮ್ಮನಂತೆ ಆತ್ಮಹತ್ಯೆಗೆ ಪ್ರಯತ್ನಿಸಲು ಪೂರಕವಾಗಿ ಬಿಡಬಹುದು. ಅಪರಾಧಿಗಳಿರಲಿ, ನಿರಪರಾಧಿಗಳಿರಲಿ ಪೋಲೀಸ್ ಠಾಣೆಗೆ ಕರೆದುಕೊಂಡು ಹೋಗುವುದರಿಂದ ಹಿಡಿದು ವಿಚಾರಣೆ ಒಂದು ಹಂತಕ್ಕೆ ಬರುವವರೆಗೆ ಲೇಡಿ ಪೋಲೀಸ್ ಉಸ್ತುವಾರಿಯಲ್ಲಿಯೇ ಇರುವುದನ್ನು ಬಂಧಿತ ರಾದ ಹೆಂಗಸರು ಹಕ್ಕಾಗಿ ಕೇಳಬೇಕು. ಜೊತೆಗೆ ವಿಚಾರಣೆ ಯನ್ನು ಬಂಧಿಸಿದ ಕೆಲವೇ ಘಂಟೆಗಳಲ್ಲಿ ಮಾಡಬೇಕೆಂದು ಒತ್ತಾಯಿಸಬೇಕು. ಅನಾವಶ್ಯಕವಾಗಿ ಪೋಲೀಸ್‌ಠಾಣೆ ಯಲ್ಲಿ ರಾತ್ರಿಯವರೆಗೆ ಉಳಿಸಿಕೊಳ್ಳುವುದನ್ನು ಪಟ್ಟಾಗಿ ವಿರೋಧಿಸಬೇಕು. ಹಾಗೆ ಉಳಿಸಿಕೊಳ್ಳುವುದು ಅನಿ ವಾರ್ಯವೇ ಆದ ಸಂದರ್ಭದಲ್ಲಿ ಲೇಡಿ ಪೋಲೀಸ್ ಉಸ್ತುವಾರಿಯಲ್ಲಿಯೇ ಇರುವ ಸವಲತ್ತುಗಳನ್ನು ಬಂಧಿ ತರಿಗೆ ನೀಡಬೇಕೆಂದು ಒತ್ತಾಯಿಸಬೇಕು. ಹಾಗಿಲ್ಲದಿದ್ದಾಗ ಅತ್ಯಾಚಾರದಂತಹ ಬೆದರಿಕೆಗಳೇ ಹೇಗೆ ಹೆಂಗಸರನ್ನು ಅಸಹಾಯಕರನ್ನಾಗಿಸಿ ಬಿಡಬಹುದೆಂಬುದನ್ನು ನಾವು ನಂಜಮ್ಮನ ಅನುಭವದಲ್ಲಿ ಕಾಣಬಹುದಾಗಿದೆ. ತಮ್ಮನ್ನು ಬಂಧಿಸಿದುದರ ಬಗ್ಗೆ, ಆ ಎಲ್ಲಾ ವಿವರಗಳ ಬಗ್ಗೆ ತಿಳಿದು ಕೊಳ್ಳುವುದಕ್ಕೆ ಬಂಧಿತರಿಗೆ ಹಕ್ಕಿರುತ್ತದೆ. ಈ ಎಲ್ಲ ಮೂಲಭೂತ ಹಕ್ಕುಗಳನ್ನು ನಂಜಮ್ಮನಿಂದ ಕಸಿದು ಕೊಂಡು, ಆಕೆಯ ಹೆಣ್ತನದ ಘನತೆಗೆ ಕುಂದು ಬರುವಂತೆ ಮಾಡಿದ ಆಕೆಯನ್ನು ಆತ್ಮಹತ್ಯೆಯ ಪ್ರಯತ್ನಕ್ಕೆ ತೊಡಗುವಂತೆ ಮಾಡಿದ ಕಾನೂನು ಪಾಲಕರಿಗೆ ಕಾನೂನು ಯಾವ ಶಿಕ್ಷೆ ಒದಗಿಸುತ್ತದೆ ಎಂಬುದನ್ನು ಕಾದು ನೋಡು ವುದರ ಜೊತೆಗೇ ನಮ್ಮ ಹಕ್ಕುಗಳ ಬಗ್ಗೆ ನಾವು ವಿವರವಾಗಿ ಜ್ಞಾನ ಹೊಂದುವುದೂ ಕೂಡ ನಮ್ಮ ರಕ್ಷಣೆಯ ಭಾಗವಾಗಿರುತ್ತದೆ ಎಂಬುದನ್ನು ನಾವು ಅರಿತು ಜಾಗೃತರಾಗಬೇಕಾಗಿದೆ.

---

**ಇಸ್ರೇಲಿನ ಪುರುಷ ಪ್ರಪಂಚ ನಿಮಗೆ ಪರಿಚಯವಿದೆಯೇ ?**

ಮಿರಿ ನಹದಾರ್ ಎಂಬಾಕೆ ಇರಾನ್‌ನಲ್ಲಿ ಮದುವೆ ಯಾದಾಗ ಆಕೆಗೆ ಹದಿನೈದು ವರ್ಷ. ಈಗ ಆಕೆಗೆ 22 ಹಾಗೂ 17 ವರ್ಷದ ಮಕ್ಕಳಿದ್ದಾರೆ. 1979ರಲ್ಲಿ ಆಯೋತೋಲ್ಲಾಸ್ ಅಧಿಕಾರಕ್ಕೆ ಬಂದಾಗ ಆಕೆ ಇತರ ಇರಾನಿಯನ್ ಜ್ಯೂಸ್‌ಗಳಂತೆ ಇಸ್ರೇಲಿಗೆ ವಲಸೆ ಬಂದರು, ಇಲ್ಲಿ ಆಕೆಯೊಡನೆ ಐದು ನಿಮಿಷವೂ ಕಾಲ ಕಳೆಯದೆ ಗಂಡ ನೊಡನೆ ಜಿಗುಪ್ಸೆ ಹೊಂದಿ ಹತ್ತು ವರ್ಷಗಳ ಹಿಂದೆಯೇ ವಿಚ್ಛೇದನಕ್ಕೆ ಇಚ್ಛೆಪಟ್ಟರು. ಬದುಕಿನಲ್ಲಿ ಅಪೇಕ್ಷಿಸಿದ್ದು ಈ ವಿಚ್ಛೇದನವನ್ನೇ ಹೊರತು ಮತ್ತೇನನ್ನೂ ಅಲ್ಲ.

ಆಕೆಯ ಗಂಡ ಒಪ್ಪಲಿಲ್ಲ. ಇಸ್ರೇಲಿನಲ್ಲಿ ಕಾನೂನು

ಬದ್ಧ ವಿವಾಹ ಅಥವಾ ವಿಚ್ಛೇದನ ಇಲ್ಲ. ಕೋರ್ಟಿಗೆ ಕೇಸ್ ದಾಖಲಾದಾಗ ನ್ಯಾಯಾಧಿಕಾರಗಳು ಆತ ಅಯೋಗ್ಯ ಗಂಡನೆಂದೂ ಹಾಗೂ ಆಕೆ ಕೇಳಿದ್ದನ್ನು ಆತ ಕೊಡಬೇಕೆಂದು ಹೇಳಿದರೂ, ಹಾಗೆ ಆತ ಮಾಡಲೇ ಬೇಕೆಂದು ಹೇಳುವ ಅಧಿಕಾರ ಅವರು ಹೊಂದಿರಲಿಲ್ಲ.

ಕೊನೆಗೆ ಜಿಗುಪ್ಸೆ ಹೊಂದಿದ ಮಿರಿ ನಹದಾರ್ ಕೆಲವು ವರ್ಷಗಳ ಹಿಂದೆ ವಿಚ್ಛೇದನದ ಬಿಲ್‌ಗೆ ಆತನ ಸಹಿ ಪಡೆಯಲು 12,000 ಡಾಲರ್ ಕೊಡಲು ಒಪ್ಪಿದಳು. ನಂತರ ಆತ ಬೇಡಿಕೆಯನ್ನು 25,000 ಸಾವಿರ ಡಾಲರ್‌ಗೆ ಏರಿಸಿದ. ಆಕೆ ಅದಕ್ಕೂ ಒಪ್ಪಿಕೊಂಡಗ 60,000ಕ್ಕೆ ಏರಿಸಿದ. ಇದಕ್ಕೆ ಮಿತಿ ಇಲ್ಲವೆಂದು ಆಕೆ ಅರಿತಳು.

ಈಗ 39 ವರ್ಷದ ಈಕೆ ಬ್ಯಾಂಕಿನಲ್ಲಿ ಕೆಲಸ ಮಾಡುತ್ತಿದ್ದು ರ್‍ಯಾಬಿನಿಕಲ್ ಕೋರ್ಟುಗಳ ಬಗ್ಗೆ ಕೋಪಗೊಳ್ಳುತ್ತಾರೆ. ಕಾನೂನಿಂದ ಅವನನ್ನು ತನಗೆ ವಿಚ್ಛೇದನ ಕೊಡಲು ಒತ್ತಾಯಿಸಬೇಕು ಎನ್ನುವ ಈಕೆ ತನ್ನ ಬದುಕಿನಲ್ಲಿ ಹೀಗೆ ಆಟವಾಡಿಸಲು ಅವರಿಗೆ ಏನು ಹಕ್ಕಿದೆ ಎಂದು ಕೇಳುತ್ತಾರೆ. ಹೀಗೆ ಸಾಮಾಜಿಕ ಸಮಸ್ಯೆಗಳು ಎಲ್ಲ ಎಲ್ಲಿ ಧಾರ್ಮಿಕ ವಿಧಿಗಳನ್ನು ಹೆಣೆದುಕೊಂಡಿದೆಯೋ ಅಂತಹ ಎಲ್ಲಾ ದೇಶಗಳಲ್ಲೂ ಮಹಿಳೆಯರು ತಮಗಿಷ್ಟವಿಲ್ಲದ ಮದುವೆಯಿಂದ ಬಿಡಿಸಿಕೊಳ್ಳಲು ಅಸಾಧ್ಯತೆ ಹೊಂದಿದ್ದಾರೆ. ಈಗ ಇಂತಹ ಸಮಸ್ಯೆಗಳು ಸಂಕೀರ್ಣವಾಗಿರುವುದರಿಂದ ಇಸ್ರೇಲ್ ಕಾನೂನಿನಲ್ಲಿ ಬದಲಾವಣೆಯೊಂದನ್ನು ಸೂಚಿಸಿದೆ. ಈಗ ಸೂಚಿಸಲ್ಪಟ್ಟ ಡೈವೋರ್ಸ್ ಬಿಲ್ ಪ್ರಕಾರ ವಿಚ್ಛೇದನದ ನಿರ್ಣಯಗಳನ್ನು ಮೂವತ್ತು ದಿನಗಳೊಳಗೆ ಪಾಲಿಸದಿದ್ದರೆ ಅಂತಹವರು ತಮ್ಮ ಪಾಸ್‌ಪೋರ್ಟ್, ಚಾಲನೆಯ ಅನುಮತಿ, ಸಾಲದ ಕಾರ್ಡು ಮುಂತಾದ ಸೌಲಭ್ಯ ಕಳೆದುಕೊಳ್ಳುತ್ತಾರೆ. ನಿತ್ಯದ ಬದುಕಿನ ಸೌಲಭ್ಯ ಕಿತ್ತುಕೊಂಡರೆ ಅವರು ವಿಚ್ಛೇದನ ನಿರ್ಣಯಗಳನ್ನು ಪಾಲಿಸುತ್ತಾರೆ ಎಂಬ ಆಶಯ ಇದರಲ್ಲಿ ಅಡಗಿದೆ. ಇದನ್ನು ಇಸ್ರೇಲಿನ ಮಹಿಳಾ ಗುಂಪುಗಳು ಸ್ವಾಗತಿಸಿವೆ.

**ಓದುಗರಿಗೆ**

ನಿಮಗೆ 'ಮಾನಸ' ಸಕಾಲಕ್ಕೆ ತಲುಪುತ್ತಿರಬಹುದು. ನಿಮ್ಮ ಸಹಕಾರ-ಬೆಂಬಲಗಳಿಂದಲೇ ಸಕಾಲಕ್ಕೆ ಪತ್ರಿಕೆ ತರಲು ನಮಗೆ ಸಾಧ್ಯವಾಗುತ್ತಿರುವುದು. ಮಹಿಳೆಯರಿಗೆ ಸಂಬಂಧಿಸಿದ ಲೇಖನ/ಕವನ/ವಿಮರ್ಶೆ ಕಳಿಸುವುದರ ಮೂಲಕ ಹೆಚ್ಚಿನ ಸಹಕಾರ ನೀಡಿ. ಚಂದಾದಾರರು ಮರೆಯದೇ ತಮ್ಮ ಚಂದಾ ನವೀಕರಿಸಿ.

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ.

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ :
" ಮಾ ನ ಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067